॥ ಓಂ ॥

॥ ಶ್ರೀಗುರು ಪರಬ್ರಹ್ಮಣೇನಮಃ ॥

ಹಿಂದೂ ಮತ್ತು ಕ್ರೈಸ್ತ ಹಾಗೂ ಇಸ್ಲಾಮ್
ಮಹಾತ್ಮರ ಕಾರಣ ವಾಕ್ಯಗಳಿಂದೊಡಗೂಡಿದ

# ಶಿವಶಕ್ತಿ ಕಾಲಜ್ಞಾನವು

÷ ಲೇಖಕರು ÷
ಪಂಡಿತ ಶ್ರೀ ರೇವಣ್ಣ ಸಾಸ್ತ್ರಿಗಳು ಬ್ರಹ್ಮ ತೀರ್ಥಾಶ್ರಮ
ದ್ಯಾಮವ್ವನಹಳ್ಳಿ



★★

ಪ್ರಕಾಶಕರು:
ಎ. ಎಂ. ಕರಡಿ ಅ್ಯಂಡ್ ಸನ್ಸ
ಪಬ್ಲಿಷರ್ ಆ್ಯಂಡ ಬುಕ್ ಸೇಲ್ಲರ್.
ಸ್ಟೇಶನ್ ರೋಡ, ಹುಬ್ಬಳ್ಳಿ.

● ● ● ●

÷ ಮುದ್ರಕರು ÷
ಅಶೋಕ ಪ್ರಿಂಟಿಂಗ್ ಪ್ರೆಸ್,
ಸ್ಟೇಶನ್ ರೋಡ, ಹುಬ್ಬಳ್ಳಿ

1982 ಬೆಲೆ : 3-00



# ಮುನ್ನುಡಿ



ಅಥರ್ವಣ ವೇದಾಂತರ್ಗತವಾದ ಜ್ಯೋತಿಷ್ಯವೈದ್ಯ ಯಂತ್ರಮಂತ್ರ ತಂತ್ರ ಗ್ರಂಥಗಳನ್ನು ಹಲವಾರು ಬರೆದು ಕನ್ನಡ ಮಾತೆಯ ಸುತರ ಹಸ್ತಕ್ಕೆ ಸಮರ್ಪಿಸಿರುವದು ಸರ್ವರಿಗೂ ವಿದಿತವೇ ಅದೆ. ಇದರಂತೆ ಯಕ್ಷ ಗಾಯನ ಹನಿ ಮಹಾಪುರಾಣ ಹಾಗೂ ಮಹಾದಾಂತ್ಯ ಚಕ್ರವರ್ತಿಯ ರೋಹಿಣಿಶಕಟ ಶನಿಮಹಾತ್ಮೆಯು ಮತ್ತು ಅಲ್ಪ ನಾಟಕಗಳನ್ನು ಬರೆದು ವಿದ್ಯುನ್ಮಣಿಗಳ ಕರಭೂಷಣ ಪುಷ್ಪವನ್ನಾಗಿ ಸಮರ್ಪಿಸಿ ದೇವತಾ ಧ್ಯಾನ ಮಗ್ನನಾಗಿ ಕುಳಿತ ಈ ಸಮಯದಲ್ಲಿ ಹಲವು ಮಹನೀಯರು ಭಾರತ ಭವಿಷತ್ಪರಂಪರೆಯನ್ನು ತಿಳಿಸಬೇಕೆಂದು ಕೇಳಿದ ಪ್ರತಿಮಾತಿನಲ್ಲಿ ಜ್ಯೋತಿಷ್ಯದಿಂದಲೂ ಹಿಂದೂ ಶಿವಶರಣರ ಪ್ರಾಚೀನ ಉಲ್ಲೇಖನದ ಗ್ರಂಥಗಳಿಂದಲೂ ಕ್ರೈಸ್ತ ಮಹಾತ್ಮರ ಬೈಬಲ್ ಗ್ರಂಥಗಳಿಂದಲೂ ಹಾಗೂ ಇಸ್ಲಾಂ ಧರ್ಮಗುರು ಗ್ರಂಥಗಳಿಂದಲೂ ಮುಂದೆ ಪ್ರಪಂಚದಲ್ಲಾಗುವ ರಾಜಪ್ರಜರ ಸುಖ ದುಃಖಗಳ ವಿಷಯವನ್ನು ಆರಿಸಿ ತಪೋಮಗ್ನತೆಯಿಂದ ಆ ಬ್ರಹ್ಮಲಿಂಗ ಸ್ವಾಮಿಯನ್ನು ಭಜಿಸುತ್ತಾ ಈ ಶಿವಶಕ್ತಿ ಕಾಲಜ್ಞಾನವನ್ನು ಶ್ರೀ ಮನ್ನೃಪ ಶಾಲಿವಾಹನ ಶಕಾಬ್ದ ೧೯೦೦ ನೆಯ ಕಾಳಾಯುಕ್ತಿ ನಾಮ ಸಂವತ್ಸರದ ಉತ್ತರಾರ್ಧದಲ್ಲಿ ಬರೆರುವೆನು. ಇದಕ್ಕೆ ಸಜ್ಜನರ ಸದಾಶೀರ್ವಾದವಾಗಲೆಂದು ಅಶಿಸುವೆನು.

ಇತಿ

ಗ್ರಂಥಕರ್ತ ಮಂತ್ರಯೋಗಿ ಪಂಡಿತ ರೇವಣ್ಣಜ್ಜ



॥ ಶ್ರೀ ಗುರು ಪರಬ್ರಹ್ಮಣೇ ನಮಃ ॥

ಹಿಂದೂ ಮತ್ತು ಕ್ರೈಸ್ತ ಹಾಗೂ ಇಸ್ಲಾಮ್ ಮಹಾತ್ಮರ
ಕಾರಣ ವಾಕ್ಯಗಳಿಂದೊಡಗೂಡಿದ

# ಶಿವಶಕ್ತಿ ಕಾಲಜ್ಞಾನವು

ಶಾ ॥ ವೃತ್ತ ॥

ಶ್ರೀ ಮನ್ಮಂಗಳ ಗೌರೀ ಚಿತ್ತನಿಲಯಂ । ಶ್ರೀ ಸಚ್ಚಿದಾನಂದನಂ ।
ಶ್ರೀ ಮದ್ಭಕ್ತ ಕಲಾಬ್ಧಿ ಸೋಮಸತತಂ । ನಿಷ್ಕಾಮಸಂಭೀಮನಂ ।
ಬ್ರಹ್ಮೇಂದ್ರಾಮರ ವಂದ್ಯ ಚಂದ್ರಧರನಂ । ನಿತ್ಯಂ ಸ್ವಯಂಧಾಮನಂ ।
ಬ್ರಹ್ಮಾನಂದವ ಮಾಳ್ಕೆನುತ್ತೆ ನುತಿಪೇಂ ಶ್ರೀ ಬ್ರಹ್ಮಲಿಂಗಾನಮಂ ।

ಹೀಗೆ ಬ್ರಹ್ಮ ತೀರ್ಥಾಶ್ರಮದ ಆಧ್ಯಾತ್ಮ ಸದ್ಗುರು ಬ್ರಹ್ಮಲಿಂಗಾ ಮೂರ್ತಿಯನ್ನು ಸ್ಮರಿಸುತ್ತಾ ಆತನ ಚರದಡಿ ವಂದಿಸಿ ಶಿವಶಕ್ತಿ ಕಾಲ ಜ್ಞಾನವನ್ನು ಸಾರುವೆನು.

## ಭೂಮಂಡಲ

ಈ ಭೂಮಂಡಲದ ಪೃಷ್ಠಭಾಗದಿಂದ ೮೦ ಮೈಲುಗಳ ಪ್ರಮಾಣ ದಲ್ಲಿ ಗಾಳಿಯೂ ಇರುತ್ತದೆ. ಅದಕ್ಕೆ ವಾತಾವರಣವೆನ್ನುತ್ತಾರೆ ವೇದದಲ್ಲಿ ಬರೆದಿರುವ ವರ್ಣದಲ್ಲಿ ಅದಕ್ಕೆ ಅಂತರಿಕ್ಷವೆಂತಲೂ ಮೇಘ, ಗುಡುಗು, ಮಿಂಚು, ಇಂದ್ರಧನುಷ್ಯ ಇತ್ಯಾದಿ ಅಂತರಿಕ್ಷದಲ್ಲಾಗುತ್ತವೆಂತಲೂ ಮೋಡವು ೫–೬ ಮೈಲಿಗಳಷ್ಟು ದೂರದಲ್ಲಿಯೇ ಉತ್ಪನ್ನವಾಗುವದೆಂ ತಲೂ ಸ್ಪಷ್ಟವಾಗುತ್ತದೆ. ಭೂಮಿಯ ಹಿಂದೆ ಅದರ ಸುತ್ತಲೂ ಎರಡೂ

ಧ್ರುವದಿಂದ ಸಮನಾದ ಅಂತರದ ಮೇಲೆ ಯಾವ ಪೂರ್ವ ಪಶ್ಚಿಮ ವರ್ತುಲವೆಂದು ಕಲ್ಪಿಸಿರುವರೋ ಅದಕ್ಕೆ ವಿಷುವವೃತ್ತವೆನ್ನುತ್ತಾರೆ.

## ಹಿಂದೂ ಮಹಾತ್ಮರ ಕಾರಣ ವ್ಯಾಖ್ಯೆಗಳು

ಯಾವ ಕಾಲದಲ್ಲಿ ಹಗಲು ಮತ್ತು ರಾತ್ರಿ ಸಮನಾಗಿರುವವೋ ಆ ಕಾಲಕ್ಕೆ ವಿಷುವಕಾಲವೆನ್ನುತ್ತಾರೆ ವಿಷುವವೃತ್ತದ ಮೇಲೆ ಯಾವ ಸ್ಥಲ ಬರುತ್ತದೆ ಅದಕ್ಕೆ ರಾತ್ರಿ ಮತ್ತು ಹಗಲು ಸಮನಾಗಿರುವದರಿಂದ ವಿಷುವ ವೃತ್ತವೆಂದು ಹೆಸರು ಬಂದಿರುತ್ತದೆ. ಸೂರ್ಯನು ವರ್ತುಳ ಮಾರ್ಗದಿಂದ ಸುತ್ತುವರಿಯುತ್ತಾನೆ ಹೀಗೆ ಕಾಣುತ್ತದೆ. ಇದಕ್ಕೆ ಕ್ರಾಂತಿವೃತ್ತವೆನ್ನುತ್ತಾರೆ. ಭೂಮಿಯು ತಿರುಗುವಾಗ ಪ್ರತಿಯೊಂದು ಬಿಂದು ವಿಷುವವೃತ್ತದ ಸಮಾಂತರ ತಿರುಗುತ್ತದೆ. ಪರಂತೂ ಸೂರ್ಯನು ಸುತ್ತುವರಿಯುವದಿಲ್ಲ. ಭೂಮಿಯು ರವಿಯ ಸುತ್ತು ತಿಗೆಯುತ್ತಾ ಇರುವಾಗ ಅದರ ಉತ್ತರ ಭಾಗವು ಸೂರ್ಯನ ಕಡೆಗೆ ಸಮೀಪಿಸಿದಾಗ ಉತ್ತರಾಯಣವೆಂತಲೂ ದಕ್ಷಿಣಭಾಗ ಸಮಿಪಿಸಿದಾಗ ದಕ್ಷಿಣಾಯನವೆಂತಲೂ ಹೇಳಲಾಗುವದು. ಮಕರ ಸಂಕ್ರಾಂತಿಯಿಂದ ಕರ್ಕಾಟಕ ಸಂಕ್ರಾಂತಿಯ ವರೆಗೆ (ತಾ. ೨೨ ಡಿಸೆಂಬರದಿಂದ ೨೨ ಜೂನದ ವರೆಗೆ) ಉತ್ತರಾಯಣ ಕರ್ಕಾಟಕ ಸಂಕ್ರಾಂತಿಯಿಂದ ಮಕರ ಸಂಕ್ರಾಂತಿಯವರೆಗೆ (ತಾ. ೨೨ ಜೂನದಿಂದ ೨೨ ಡಿಸೆಂಬರ ವರೆಗೆ) ದಕ್ಷಿಣಾಯಣವೆನ್ನುವರು. ಉತ್ತರಾಯಣದಲ್ಲಿ ಹಗಲು ಕ್ರಮೇಣ ಹೆಚ್ಚಾಗುತ್ತಲೂ ದಕ್ಷಿಣಾಯಣದಲ್ಲಿ ರಾತ್ರಿ ಹೆಚ್ಚಾಗುತ್ತಲೂ ಇರುತ್ತವೆ ಮಾರ್ಚ ಮತ್ತು ಸಪ್ಟಂಬರ ತಿಂಗಳು ೨೨ ನೇ ತೇದಿಯಲ್ಲಿ ಹಗಲೂ, ರಾತ್ರಿಯೂ ಸಮಾನ ಕಾಲವಾಗಿರುತ್ತದೆ. ಈ ಉತ್ತರಾಯಣ ದಕ್ಷಿಣಾಯಣಗಳು ದೇವತೆಗಳ ದಿವಸ ರಾತ್ರಿಗಳಾಗಿ ಹೇಳುತ್ತಾ.

ಭೂಮಿಯಿಂದ ಚಂದ್ರನು ೨೪೦೦೦೦ ಮೈಲು ದೂರದಲ್ಲಿರುತ್ತಾನೆ. ಸೂರ್ಯನಿಂದ ಮಂಗಳನ ಅಂತರವು ೧೪೧೦ ಲಕ್ಷ ಮೈಲು ಮತ್ತು ಭೂಮಿಯು ೯೨೩ ಲಕ್ಷ ಮೈಲು ಇರುತ್ತದೆ. ಮಂಗಳನು ಸೂರ್ಯನ ಒಂದು ಪ್ರದಕ್ಷಿಣೆಯೂ ೬೮೭ ದಿವಸಗಳಲ್ಲಿ ಮುಗಿಯುತ್ತದೆ. ಬುಧನು

ಸೂರ್ಯಗ್ರಹದ ಸಮೀಪಕ್ಕೆ ಇರುತ್ತಾನೆ ಸೂರ್ಯನಿಂದ ಮೂರೂವರೆ ಕೋಟಿ ಮೈಲುಗಳ ಅಂತರದಲ್ಲಿರುತ್ತಾನೆ. ಸೂರ್ಯನ ಸೂತ್ತಲೂ ಒಂದು ಸುತ್ತು ತಿರುಗಬೇಕಾದರೆ ೮೮ ದಿವಸಗಳು ಬೇಕಾಗುತ್ತವೆ.

ಗುರುಗ್ರಹವು ಭೂಮಿಗಿಂತ ೧೨೪೦ ಪಟ್ಟು ದೊಡ್ಡದಿರುತ್ತದೆ. ಶುಕ್ರನು ಸೂರ್ಯನ ಸುತ್ತು ತಿರುಗುತ್ತಾನೆ ಶನಿಯು ಸೂರ್ಯನ ಸುತ್ತು ಮುಗಿಸಬೇಕಾದರೆ ೨೯॥ ವರ್ಷ ಬೇಕಾಗುತ್ತದೆ ಶನಿಯ ಕೆಳಭಾಗದಲ್ಲಿ ಕ್ರಮವಾಗಿ ಗುರು, ಕುಜ, ರವಿ, ಶುಕ್ರ, ಬುಧ ಚಂದ್ರರಿರುತ್ತಾರೆ. ಭೂಮಿಯು ಗೋಳವಾಗಿದ್ದು ತಿರುಗುವಾಗ ಅದರ ಅರ್ಧ ಭಾಗವು ಸೂರ್ಯನ ಕಡೆಗೆ ಇರುವದರಿಂದ ಹಗಲೆಂತಲೂ ಇಲ್ಲದಿರುವಾಗ ರಾತ್ರಿ ಎಂತಲೂ ಹೇಳಲಾಗುತ್ತದೆ. ಒಂದು ದಿವಸಕ್ಕೆ ೨೪ ತಾಸುಗಳಂತೆ ದಿನ ಮಾನವು ಸವಿಯುತ್ತಾ ಬರುತ್ತದೆ.

## ಸಪ್ತರ್ಷಿ ಮಂಡಲ ವಿವರವು

ಸಪ್ತರ್ಷಿಗಳ ಗ್ರಹಮಂಡಲವು ಪೂರ್ವಕ್ಕೆ ಅಗ್ರವಾಗರುವ ಶಕಟಾ ಕಾರವುಳ್ಳ ನಕ್ಷತ್ರ ಮಂಡಲವೇ ಸಪ್ತರ್ಷಿಗಳ ಮಂಡಲವು ಆ ಮಂಡಲದ ಎತ್ತರದ ಮೇಲೆ ಪೂರ್ವಭಾಗದಲ್ಲಿರುವುದೇ ಮರೀಚಿಯು ಅದರ ಪಶ್ಚಿಮ ಭಾಗದಲ್ಲಿ ಸ್ವಲ್ಪ ಕೆಳಗೆ ಅರುಂಧತಿ ಸಮೇತ ವಶಿಷ್ಠರು ಅವರ ಪಶ್ಚಿಮಕ್ಕೆ ಸ್ವಲ್ಪ ಎತ್ತರದ ಮೇಲೆ ಋಷಿಗಳ ಮೂಲದಲ್ಲಿ ಅಂಗೀರಸರು ಆಮೇಲೆ ಪಶ್ಚಿಮದಲ್ಲಿ ಈಶಾನ್ಯಕ್ಕೆ ಅತ್ರಿಯು ಇವರ ದಕ್ಷಿಣಕ್ಕೆ ಪುಲಸ್ತ್ಯರು, ಇವರ ಪಶ್ಚಿಮದಲ್ಲಿ ಪುಲಹರು, ಇವರ ಉತ್ತರಕ್ಕೆ ಕೃತು ಹೀಗಿರುತ್ತಿರಲಾಗಿ ಇವರ ಮಧ್ಯದಲ್ಲಿ ಮೊದಲು ಉದಯವಾಗತಕ್ಕ ಪುಲಹ ಕೃತು ಸಂಜ್ಞಿಕ ತಾರೆಗಳು ಈ ಎರಡೂ ತಾರೆಗಳ ಮಧ್ಯದಲ್ಲಿ ಯಾವ ತಾರೆಗೆ ಸಮಾನ ದಕ್ಷಿಣ ದಲ್ಲಿ ಅಶ್ವಿನ್ಯಾದಿ ೨೭ ನಕ್ಷತ್ರಗಳಲ್ಲೊಂದು ತಾರೆ ಇರುವದೋ ಆ ತಾರೆ ಯನ್ನು ಕೂಡಿಕೊಂಡು ಸಪ್ತರ್ಷಿಗಳ ಮಂಡಲವು ಮಾನವನ ಆಯುಷ ಪ್ರಮಾಣದ ೧೦೦ ವರ್ಷಗಳ ವರೆಗೆ ಸಂಚರಿಸಿದ ನಂತರ ಮತ್ತೊಂದ್ಸೆ ನಕ್ಷತ್ರವು ಈ ಸಪ್ತರ್ಷಿ ಮಂಡಲವನ್ನು ಹೊಳಹೋಗುತ್ತದೆ ಕೃತಯು

ಗಾರಂಭವನ್ನು ಲೋಕವಿಖ್ಯಾತರಾದ ಮಹರ್ಷಿಗಳು ಹೀಗೆ ಉಲ್ಲೇಖನ ಗೈದಿದ್ದಾರೆ.

-ಃ ಶ್ಲೋಕ ಃ-

ಯದಾಚಂದ್ರಶ್ಚ ಸೂರ್ಯಶ್ಚದಾತಿಷ್ಯ ಬೃಹಸ್ಪತಿಃ
ಏಕರಾಶೌ ಸಮೇಷ್ಯಂತಿತದಾ ಭವತಿತತ್ಕೃತಂ ||

ಯಾವ ಕಾಲದಲ್ಲಿ ಗುರು, ಚಂದ್ರ, ರವಿ; ಗ್ರಹಗಳು ಒಮ್ಮೆಲೇ ಅಂಶಕತಿವಿಕತಿಗಳಿಂದ (ಸಮ ಸಂಖ್ಯೆಗಳಿಂದ) ಪುಷ್ಯಾ ನಕ್ಷತ್ರದಲ್ಲಿ ಪ್ರತೀ ಮಾಡುವರೋ ಅದೇ ಕಾಲಕ್ಕೆ ಯುಗಾರಂಭವಾಗುವದೆಂತಲೂ ಇಂಥ ಯೋಗದಲ್ಲಿಯೇ ಕೃತಯುಗಾರಂಭವಾಗಿರುವದೆಂತಲೂ ಹೇಳಿರುವರು. ಕಲಿ ಯುಗವಾದರೂ—

-ಃ ಶ್ಲೋಕ ಃ-

ಯದಾಮಘಾಭ್ಯೋಯಾಸಂತಿ ಪೂರ್ವಷಾಡಂ ಮಹರ್ಷಯಃ |
ತದಾನಂದಾನ್ ಪ್ರಭೃತ್ಯೇಷಕಲಿಃ ವೃದ್ಧಿಮಿಷ್ಯತಿಃ |

ಮಘಾ ನಕ್ಷತ್ರದಲ್ಲಿ ಸಪ್ತರ್ಷಿಗಳಿರುವಾಗ ಕಲಿಯುಗವು ಪ್ರಾರಂಭಿಸಿ ದೆಂತಲೂ ನಂತರ ಪೂರ್ವಾಷಢ ನಕ್ಷತ್ರದಲ್ಲಿ ಸಪ್ತರ್ಷಿಗಳಿರುವಾಗ ಕಲಿ ಯುಗವು ವೃದ್ಧಿಯಾಯಿತೆಂತಲೂ ಹೇಳಿರುವರು, ಪ್ರಸ್ತುತ ಈಗ ಸಪ್ತ ರ್ಷಿಗಳು ಕೃತ್ತಿಕಾ ನಕ್ಷತ್ರವನ್ನು ದಾಟಿ ರೋಹಿಣಿ ನಕ್ಷತ್ರದಲ್ಲಿ ಸಂಚರಿಸು ವರೆಂದು ಕಾಲಜ್ಞಾನಿಗಳು ಗಣಿತದಿಂದ ಸ್ಥಿರ ಮಾಡಿರುವರು.

## ಬ್ರಹ್ಮನ ಆಯುರ್ದಾಯ

ಕೃತ ತ್ರೇತಾ ದ್ವಾಪರ ಕಲಿ ಯುಗಗಳು ಸೇರಿ ಒಂದು ಸಾವಿರ ವೇಳೆ ತಿರುಗಿದರೆ ಬ್ರಹ್ಮದೇವರಿಗೆ ಒಂದು ದಿವಸವಾಗುತ್ತದೆ. ನಾಲ್ಕು ಲಕ್ಷ ಮೂವತ್ತೆರಡು ಸಾವಿರ ವರ್ಷ ಕಲಿಯುಗ ಪ್ರಮಾಣವು ಇದರ ಎರಡ ರಷ್ಟು ದ್ವಾಪರಾಯುಗ ಪ್ರಮಾಣವು ಇದರ ಮೂರರಷ್ಟು ತ್ರೇತ್ರಾಯು ಪ್ರಮಾಣವು ಇದರ ನಾಲ್ಕರಷ್ಟು ಕೃತಯುಗ ಪ್ರಮಾಣವು ಈ ಬ್ರಹ್ಮನ

ಒಂದು ದಿನದಲ್ಲಿ ಸ್ವಯಂಬುವಾದಿ ಹದಿನಾಲ್ಕು ಮನ್ವಂತರಗಳು ತಿರುಗುತ್ತವೆ ಒಂದೊಂದು ಮನ್ವಂತರದಲ್ಲಿ ೭೧ ಮಹಾಯುಗಗಳಾಗುತ್ತವೆ. ಒಂದು ಮಹಾಯುಗದ ಪ್ರಮಾಣ ೪೩ ಲಕ್ಷ ೨೦೦೦೦ ಇರುತ್ತದೆ. ಸಧ್ಯಗಳ ಮನ್ವಂತರಗಳಲ್ಲಿ ಆರು ಮನ್ವಂತರಗಳು ಗತಿಸಿ ಏಳನೆಯದಾದ ವೈವಸ್ವತಃ ಮನ್ವಂತರದಲ್ಲಿ ೨೭ ಮಹಾಯುಗಗಳು ಗತಿಸಿ ೨೮ ನೇ ಮಹಾಯುಗವು ನಡೆಯಲ್ಪಡುತ್ತದೆ. ಇಲ್ಲಿಗೆ ಬ್ರಹ್ಮದೇವನ ನೂರು ವರ್ಷ ಆಯುರ್ದಾಯದಲ್ಲಿ ೫೧ ವರ್ಷ ಮೊದಲನೆಯ ದಿನ ೧೩ ಘಳಿಗೆ ೬೨ ಘಳ ೪೩ ಘಳಿಗೆಗಳಾಗಿರುತ್ತದೆ. ಇಲ್ಲಿಗೆ ೨೧ ಯುಗಗಳು ಗತಿಸಿ ಕೊನೆಯದಾದ ಕಲಿಯುಗ ನಡೆಯುಲ್ಪಡುತ್ತದೆ.

## ಯುಗಭಗಣ

ಆದಿ—ಅನಾದಿ ಅಳಂದರ, ವಿಳಂದರ ಕಳಂದರ, ಅನಂತ ಅರ್ಬುದತಮುಂದ, ಕಂಡಜಿ ತಾರಜಿ ಭಿನ್ನಜಿ ಭಿನ್ನಾಯುಕ್ತ ಆಯುಕ್ತ ಮಣಿರಣಮಾನ್ಯತಣ, ವಿಶ್ವಾವಸು, ಅಲಂಕೃತ ಕೃತತ್ರೇತಾ ದ್ವಾಪರ ಕಲಿಗಳೆಂಬ ೨೧ ಮಹಾಯುಗಗಳು ಬ್ರಹ್ಮದೇವರಿಂದ ನಿರ್ಮಿತವಾಗಿರುತ್ತವೆ,

## ವಿವಿಧ ಉತ್ಪಾತಗಳಾಗುವ ಯೋಗ

ಸೂರ್ಯ ಚಂದ್ರರಿಗೆ ಭೂಮಿಯ ನೆರಳಿನಿಂದುಂಟಾಗುವ ಗ್ರಹಣಗಳೂ ನಕ್ಷತ್ರಗಳು ಉದುರುವುದೂ ಹಗಲೂ ಹೊತ್ತಿನಲ್ಲಿ ನಕ್ಷತ್ರಗಳೂ ಕಾಣುವದೂ ಕತ್ತಿಯಾಕಾರದ ನಕ್ಷತ್ರ ಹುಟ್ಟುವದೂ ಆಕಾಶದಿಂದ ಕೊಳ್ಳಿ ಬೀಳುವದೂ ದೊಡ್ಡದಾದ ಕೊಳ್ಳಿಯಂತೆ ಮಿಂಚುವದೂ ಇವೆಲ್ಲ ಅಗ್ನಿ ಸಂಬಂಧವಾದ ಉತ್ಪಾತಗಳು.

ಗ್ರಹಗತಿಗಳು ತಪ್ಪಿ ಹೋಗುವದು, ದಿಕ್ಕುಗಳಲ್ಲಿ ಉರಿ ಏಳುವದು ವಿಷದ ಗಾಳಿ ಬೀಸುವದು, ರಕ್ತದ ಮಳೆ, ಕಲ್ಲಿನ ಮಳೆ, ಮಣ್ಣಿನ ಮಳೆ, ವಿಷದ ಮಳೆ, ಜಂತುಗಳ ಮಳೆ, ಲೋಹವರ್ಷಣ ಇವೆಲ್ಲ ಅಂತರಿಕ್ಷ ಸಂಬಂಧದ ಉತ್ಪಾತಗಳು.

ಪುಣ್ಯ ಕ್ಷೇತ್ರಗಳಲ್ಲಿ ದೇವತಾ ವಿಗ್ರಹ ಕದಲಾಡುವದೂ ಆ ವಿಗ್ರಹ ಗಳಿಗೆ ಅಂಗಭಂಗವಾಗುವದೂ, ಬೆಟ್ಟಗಳು ಬಿರಿಯುವದೂ, ಬೆಟ್ಟಗಳಲ್ಲಿ ಉರಿ ಏಳುವದೂ, ಭೂಕಂಪವು ಭೂಮಿಯು ಗೋಳು ಮಾಡುವದೂ, ಗಿಡವು ಮುರಿದು ಬೀಳುವದೂ, ಗೋಪುರಗಳು, ಮನೆಗಳು ಬಿದ್ದು ಹೋಗು ವದೂ, ಶಿಖರಗಳು ಮುರಿದು ಬೀಳುವದೂ, ರಾಜಧ್ವಜ ಮುರಿದು ಬೀಳು ವದೂ, ಭೂಮಿಯಲ್ಲಿ ಉರಿ ಏಳುವದೂ, ಸಮುದ್ರದಲ್ಲಿ ಬೆಂಕಿ ಜ್ವಾಲೆ ಏಳುವದೂ, ನೆಲದಲ್ಲಿ ಮತ್ತು ಸಮುದ್ರದಲ್ಲಿ ಹೊಗೆ ಏಳುವದೂ, ಸಮುದ್ರ ದಲ್ಲಿ ರಕ್ತದ ನೊರೆಗಟ್ಟುವದೂ, ಮುಂಗಡೆ ಸಮುದ್ರದಲ್ಲಿ ನೀರಿನ ದೊಡ್ಡ ದೊಡ್ಡ ಸುಳಿಗಳು ಏಳುವದೂ, ಗಾಣ ಮುಂತಾದ ಯಂತ್ರ ಸಾಮಾನು ಗಳು ಹೊಡೆದು ಹೋಗೋಣ. ನೆಲದಿಂದ ಬಿಸಿ ನೀರು ಉಕ್ಕುವದೂ, ಸಮಸ್ತ ಪದಾರ್ಥಗಳಲ್ಲಿ ಹುಳಗಳು ಬೀಳೂವದೂ, ಆಯುಧಗಳು ಮುರಿದು ಬೀಳುವದೂ, ಸ್ವಭಾವವಾದ ರಸಗಂದಾದಿಗಳಲ್ಲಿ ಗುಣ ಬದಲಾಯಿಸುವದೂ ಜಂತುಗಳು ವಿಜಾತಿಗಳು ವಿಕಾರ ಮಾಡುವದೂ, ಮುಂತಾದವುಗಳು ಭೂ ಸಂಬಂಧವಾದ ಉತ್ಪಾತಗಳೆಂಬುದಾಗಿ ತಿಳಿಯಬೇಕು

## ಧೂಮಕೇತುಗಳು

ಯಾವ ಜೋತಿಷ್ಕಿಗಳು ಉದಯಾಸ್ತ ಗಣಿತದಿಂದ ಕಂಡು ಹಿಡಿ ಯಲು ಅಸಾಧ್ಯವೋ ಅವುಗಳೇ ಉತ್ಪಾತಗಳು. ಅಂತರಿಕ್ಷ ಭೌಮ ದಿವ್ಯ ಎಂದು ಮೂರು ವಿಧವಾಗಿದೆ. ಮನೆ, ಆಯುಧ, ಕುದುರೆ, ವೃಕ್ಷ, ಆನೆ ಇವುಗಳ ಜಾಲ ರೂಪವೇ ಆಗಿ ಕಾಣಿಸುವ ಕೇತುಗಳು ಅಂತರಿಕ್ಷ ಸಂಬಂಧ ವಾದವುಗಳು ನಕ್ಷತ್ರಗಳ ಮಧ್ಯದಲ್ಲಿ ಅಗ್ನಿ ರೂಪದಿಂದ ಕಾಣಿಸುವ ಕೇತು ಗಳೇ ದಿವ್ಯಗಳು ಭೂಮಿಯಲ್ಲಿ ಅಗ್ನಿ ರೂಪವಾಗಿ ಕಾಣಿಸುವ ಕೇತುಗಳೇ ಭೌಮಗಳು.

ಈ ಧೂಮಕೇತುಗಳು ನೂರರಿಂದ ಸಾವಿರದ ವರೆಗೂ ಇರುವವು. ಈ ಕೇತುಗಳು ಎಷ್ಟು ದಿವಸ ಕಾಣಿಸುತ್ತವೆಯೋ ಅಲ್ಲಿಗೆ ಒಂದೂವರೆ ತಿಂಗಳ ನಂತರ ಅಷ್ಟು ತಿಂಗಳು ಫಲವನ್ನು ಕೊಡುತ್ತವೆ. ಎಷ್ಟು ತಿಂಗಳು ಕಾಣಿಸುತ್ತವೆಯೋ ಆ ಒಂದೂವರೆ ವರ್ಷಗಳ ನಂತರ ಅಷ್ಟು ವರ್ಷ ಫಲ

ವನ್ನು ಕೊಡುತ್ತವೆ. ಸೂರ್ಯ ಚಂದ್ರರ ಬಿಂಬಿಗಳ ಮೇಲೆ ತಾಯಶಕೀಲಕ ಗಳೆಂಬ ಕೇತುಗಳು ಕಾಣುವದುಂಟು. ಅವುಗಳಾದರೂ ಕಾಗೆ ಆಯುಧ ಮುಂಡ ಇವೇ ಮೊದಲಾದ ಆಕಾರದಂತೆ ಕಾಣುವದುಂಟು.

## ಇದು ಆಗುವದನ್ನು ತಿಳಿಯುವ ಕಾಲಜ್ಞಾನ

ಭೂಮಿಯಲ್ಲಿ ನಿರ್ಮಲವಾದ ನೀರು ಕಲಕಿಹೋಗುವದು. ಆಕಾಶ ವನ್ನೆಲ್ಲಾ ಕೆಂಧೂಳಿ ಮುಚ್ಚುವದೂ, ಅಕಾಲದ ಫಲಪುಷ್ಪ ಮತ್ತು ಭೂಕಂಪ ಇತ್ಯಾದಿಗಳು ಯಾವಾಗ ಉಂಟಾಗುವವೋ ಅವಾಗ ಮೇಲ್ಕಂಡ ತಾಮಸ ಕೀಲಕಗಳೆಂಬ ಕೇತುಗಳು ಸೂರ್ಯ ಚಂದ್ರರ ಬಿಂಬಗಳಲ್ಲಿ ಮೂಡಿರುವವು ಎಂದು ತಿಳಿಯಬೇಕು. ಈ ಪ್ರಕಾರವಾಗಿ ರಕ್ತ ಕೇತು ಮಣಿ ಕೇತು ಶ್ವೇತಕೇತು ಇವೇ ಮೊದಲಾದ ಅನೇಕ ಕೇತುಗಳು ಮೂಡುತ್ತಿರು ವವು. ಈ ಕೇತುಗಳು ನೂರಾರು ವರ್ಷಗಳಿಗೂ ಅಥವಾ ಸಾವಿರಾರು ವರ್ಷ ಗಳಿಗೂ ಒಂದೊಂದು ಕಾಣಿಸುತ್ತಾ ಬರುವವು.

## ಕಂಕಣ ಗ್ರಹಣ

ರಾಹು ಕೇತು ಗ್ರಸ್ತಗ್ರಹಣವಲ್ಲದೆ ಶುಕ್ರಗ್ರಸ್ತ ಗ್ರಹಣವೆಂದೂಂದೂ ಗ್ರಹಣವಿರುವದು ೧೫೦ ವರ್ಷಗಳಿಗೊಂದು ಸಾರಿ ಸೂರ್ಯಬಿವಬಕ್ಕೆ ಅಡ್ಡವಾಗಿ ಬೆಳವಲ ಹಣ್ಣಿನಂತೆ ಕಪ್ಪಾಗಿರುವ ಮಚ್ಚೆಯೊಂದು ಮೇಲೆ ಹುಟ್ಟಿ ಎರಡೂ ಕೊನೆಗೂ ಅಡ್ಡವಾಗಿ ಸಂಚರಿಸುವದು. ಆಗ ಆ ಭಾಗವು ಕಾಂತಿಹೀನವಾಗಿ ಕಾಣುವದು. ಇದೇ ಕಂಕಣ ಗ್ರಹಣವೆಂದು ಹೆಸರು. ಇದು ಕಂಡರೆ ದೇಶವೆಲ್ಲ ಹಾಹಾಕಾರ, ಬರ, ಮರಣಗಳಿಂದ ನಾಶಹೊಂದು ವದಾಗಿ ಕಾಲಜ್ಞಾನಿಗಳು ಹೇಳಬೇಕು.

## ಅಷ್ಟಗ್ರಹ ಕಾಲಕೂಟ ಯೋಗ

ಎಂಟು ಗ್ರಹಗಳು ಒಂದೇ ರಾಶಿಯಲ್ಲಿ ಕೂಡುವದರಿಂದ ಅಷ್ಟಗ್ರಹ ಕಾಲಕೂಟ ಯೋಗವಾಗಿ ರಾಜ ಪ್ರಜರು ಅನೇಕ ನಷ್ಟ ಕಷ್ಟಗಳಿಗೆ ಗುರಿ ಯಾಗುವರು ಇಂಥ ಯೋಗವು ಕ್ರಿ. ಶ ೧೯೬೨ ನೇ ಇಸ್ವಿ ಫೆಬ್ರುವರಿ ತಿಂಗ ಳಲ್ಲಿ ಮಕರ ರಾಶಿಯ ಮೂಲಕ ನಡೆದು ಹೋಗಿದೆ.

## ಸಪ್ತಗ್ರಹ ಯೋಗ

ಏಳು ಗ್ರಹಗಳು ಒಂದು ರಾಶಿಯಲ್ಲಿ ಕೂಡುವುದೇ ಸಪ್ತಗ್ರಹ ಯೋಗವು. ಹೀಗೆ ಕೂಡುವದರಿಂದ ದೇಶವೆಲ್ಲಾ ಹಾಹಾಕಾರದಿಂದ ಬಳಲು ವದು ಇಂಥಾ ಯೋಗವು ಕ್ರಿ. ಶ೧೯೬೨ ನೇ ಇಸ್ವಿ ಫೆಬ್ರುವರಿ ತಿಂಗಳಲ್ಲಿ ಮಕರ ರಾಶಿಯಲ್ಲಿ ನಡೆದು ಹೋಗಿದೆ.

## ಷಷ್ಟಗ್ರಹ ಪಂಚಗ್ರಹ ಯೋಗ ವಿಚಾರವಾಗಿ

### ರುದ್ರಯಾಮಳದಲ್ಲಿ ಶ್ಲೋಕ :—

ಯದಾಶುಕ್ರಶ್ಲ ಭೌಮುಶ್ವರ ವಿರಾಹುಶನ್ಯೈಶ್ವರಾಃ |
ಏಕತ್ವೇಕ ತ್ರಗಾದೇವಿಜಾಯತೇಹಿಮುಹದ್ಭಯಂ |
ಸಪ್ತದ್ವೀಪೇಷು ಪೀಡ್ಯಂಕೇ ಮಾನುಷಾಶ್ವಕ್ಷಯಂಪಥಾ
ಛತ್ರ ಭಂಗೋಭವೇದ್ದೇವಿ ಚತುರ್ದಿಕ್ಷು ಪ್ರಪೀಡನಂ ||೮||

ಲೋಕದಲ್ಲಿ ಮಹಾ ಭಯ ಉಂಟಾಗುವದು ಸಪ್ತದ್ವೀಪದ ಜನರಿಗೂ ಶಹ ಪೀಡೆ ಉಂಟಾಗುವದು ಮನುಷ್ಯರು ನಾಶಹೊಂದುವರು. ಛತ್ರಭಂಗ ವಾಗುವದು ಅನಾವೃಷ್ಟಿ ಅಗ್ನಿ ಭಯ, ಚೋರ ಭಯ, ಕಾಲರಾ, ಪ್ಲೇಗ್ ಇನ್‌ಫ್ಲುಯಂಜಾ ಮೊದಲಾದವುಗಳಿಂದ ಜನರು ಪೀಡಿತರಾಗುವರು. ರಾಜರಲ್ಲಿ ಪರಸ್ಪರ ಯುದ್ಧಗಳಾಗುವವು. ಎಲ್ಲಾ ರಾಷ್ಟ್ರಗಳಲ್ಲಿ ಜನರು ಹಾಹಾಕಾರದಿಂದ ಬಳಲುವರೆಂದು ಶ್ರೀ ಶಿವನು ಪಾರ್ವತಿದೇವಿಗೆ ಹೇಳಿ ರುವನು.

ಶ್ಲೋಕ :—ಪಂಚಗ್ರಹಾಹಂತಿ ಸಮಸ್ತ ಭೂಪಾನ್
ಷಷ್ಟಗ್ರಹಾಹಂತಿ ಸಮಸ್ತದೇಶಾನ್
ಸಪ್ತಗ್ರಹಾಹಂತಿ ಲೋಕಭಯಂ

ಈ ಪ್ರಕಾರವಾಗಿ ಸಪ್ತಮ ಷಷ್ಟಮ ಪಂಚಮ ಗ್ರಹಯೋಗದಿಂದ ದೇಶವೇಲಾ ಬರ, ಮರಣಗಳಿಂದ ತಾಪ ಹೊಂದುವದು,

ಶ್ಲೋಕಃ—ಛತ್ರಂಧ್ವಜಶ್ಮರೋವೀಣಾ| ಚಾಮರಂತೋ
ಮರಂಪಣೇ |
ಪ್ರಾಗಾದಿ ಪಶ್ಚಿಮೇಯಾಶೀ | ದಕ್ಷಿಣೇ ಜೋತ್ತ್ರಶೀತಥಾ ॥೧॥
ಕ್ಷಾಮಾಡಂಬರಪೂಹುಸ್ತು | | ಧೂಮಕೇತೋಸ್ತ ಥೈವಚ॥
ಛತ್ರಂ ಧ್ವಜಶ್ಮರೋವೀಣಾ | ಚಾಮರಂತೋಮರಂಪಣೇ ॥೨॥
ದೂಮ್ರಾರಕ್ತಚ ಕೃಷ್ಣಾಚ | ಶ್ವೇತರಕ್ತಾಚಪಾಟಲಾ ॥
ಸುಭಿಕ್ಷಂ ಶ್ವೇತ ರಕ್ತಾಚ | ದೂಮದುರ್ಭಿಕ್ಷಮಾಪ್ನುಯಾತ್॥
ರಕ್ತಾವೃಷಿಃ ವಿನಾಶಾಯ | ಕೃಷ್ಣೇಯುದ್ಧಂಭವೇನ್ಮಹಾತ್

॥ ಟೀ ॥

ಧೂಮಕೇತುವು ಧ್ವಜ, ಬಾಣ, ವೀಣಾ, ಚಾಮರ, ತೋಪುರ, ಸರ್ಪ ಈ ಆಕಾರವಾಗಿದ್ದು ನಾಲ್ಕು ದಿಕ್ಕುಗಳಲ್ಲಿಯೂ ಆಕಾಶ ಮಧ್ಯದಲ್ಲಿ ಕಾಣಿಸಲ್ಪಡುವದು ಇದು ಮೂಡಿದರೆ ದೇಶಕ್ಕೆ ಕ್ಷಾಮಡಂಬರ ಉಂಟಾಗುವದು. ಈ ಧೂಮಕೇತುವು ಬಿಳುಪು ಮತ್ತು ರಕ್ತವರ್ಣದ್ದಾಗಿದ್ದರೆ ಸ್ವಲ್ಪ ಸುಭಿಕ್ಷವು ದೂಮ್ರವರ್ಣವಾಗಿದ್ದರೆ ದುರ್ಭಿಕ್ಷವು, ರಕ್ತವರ್ಣವಾಗಿದ್ದರೆ ಮಳೆಗಾಲ ನಾಶನವು, ಕಪ್ಪುವರ್ಣವಾಗಿದ್ದರೆ ಯುದ್ಧ ಭಯವು, ಹೀಗೆ ಧೂಮಕೇತುಗಳು ಉದಿಸುವ ಫಲವಾಗಿರುತ್ತದೆ.

## ನವದಿಕ್ಕಿನ ಧೂಮಕೇತುಗಳು ಶುಭಾಶುಭ ಫಲಗಳು

ಪೂರ್ವ ದಿಕ್ಕಿನಲ್ಲಿ ಧೂಮಕೇತು ಮೂಡಿದರೆ ಆ ಮುಂದಿನ ವರ್ಷ ತಮ್ಮ ಮಕ್ಕಳನ್ನೇ ಮಾರಿಕೊಂಡು ಜೀವಿಸುವ ಬರಗಾಲ ಬರುತ್ತದೆ. ದಕ್ಷಿಣ ಮತ್ತು ಆಗ್ನೇಯ ದಿಕ್ಕುಗಳಲ್ಲಿ ಉತ್ಪನ್ನವಾದರೆ ಪ್ರಪಂಚದಲ್ಲಿರುವ ಆನೆ ಕುದುರೆಗಳು ಮತ್ತು ದನಕರುಗಳೂ ಹಾಗೂ ಮನುಷ್ಯರೂ ಇವುಗಳೆಲ್ಲ ಸಮನಾಗಿ ಯಮಪಟ್ಟಣವನ್ನು ಸೇರುವವು.

ನೈಋತ್ಯ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಕಾಣಬಂದರೆ ಜಗತ್ತಿನಲ್ಲಿ ಅತ್ಯಂತ ಮಳೆಯುಂಟಾಗಿ ಅನಂತ ಕಡೆ ಜಲಪ್ರಳಯವಾಗುವದು.

ವಾಯುವ್ಯ ದಿಕ್ಕಿನಲ್ಲಿ ಧೂಮಕೇತು ಉದಯವಾದರೆ ಅಪರಿಮಿತವಾದ ಬರಗಾಲ ಬರುತ್ತದೆ. ಉತ್ತರ ದಿಕ್ಕಿನಲ್ಲಿ ಧೂಮಕೇತು ಉದಯವಾದರೆ ಸುವೃಷ್ಟಿಯಿಂದ ಜಗತ್ತೆಲ್ಲಾ ಆನಂದವಾಗಿರುತ್ತದೆ. ಈಶಾನ್ಯ ದಿಕ್ಕಿನಲ್ಲಿ ಧೂಮಕೇತು ಉದಯವಾದರೆ ಮೂರು ವರ್ಷ ರಾಜ ಪ್ರಜರು ಬರ ಮರಣಗಳಿಂದ ಬಳಲುವರು ಧೂಮಕೇತು ಉದಯಿಸುವ ಕಾಲದಲ್ಲಿ ಕೆಂಬಣ್ಣವಾಗಿದ್ದರೆ ಅರಸರ ದರ್ಪವು ನಾಶವಾಗುವದು ಜನಗಳು ಬಾಧೆಗಳಿಂದ ಬಳಲುವರು. ಬಿಳಿ ವರ್ಣವಿದ್ದರೆ ದೇಶವು ಕಷ್ಟಕ್ಕೀಡಾಗುವದು. ಹಳದಿ ಬಣ್ಣದಿಂದ ಕಾಣಿಸಿದರೆ ವೈಶ್ಯ ವರ್ಗವೆಲ್ಲಾ ನಾಶವಾಗುವದು. ನೀಲ ಮೇಘವರ್ಣವಾಗಿದ್ಧರೆ ಶೂದ್ರ ವರ್ಗಕ್ಕೆನಾ ಹಾನಿ ತಟ್ಟುವದು. ಧೂಮಕೇತು ಹಗಲು ಕಂಡರೆ ದೇಶದ ಅರಸರಿಗೆ ಕೇಡು, ರಾತ್ರಿ ಕಂಡರೆ ದೇಶಕ್ಕೆ ದೊಡ್ಡ ಬರ ಬಿದ್ದು ನಾಶವಾಗುವದು. ಧೂಮಕೇತು ಆದಿತ್ಯವಾರ ಶನಿವಾರ ಮಂಗಳವಾರಗಳಲ್ಲಿ ಪ್ರಥಮವಾಗಿ ಕಂಡರೆ ಮೂರು ವರ್ಷ ಕಾಲ ಬರ ಮರಣದಿಂದ ಜಗತ್ತು ತಲ್ಲಣಿಸುವದು. ಸೋಮವಾರ ಬುಧವಾರ ಗುರುವಾರ ಶುಕ್ರವಾರಗಳಲ್ಲಿ ಪ್ರಥಮ ಕಂಡರೆ ದೇಶಕ್ಕೆ ಸುಭಿಕ್ಷವಾಗುವದು. ಭರಣಿ ಕೃತ್ತಿಕ ಆಶ್ಲೇಷ ಈ ನಕ್ಷತ್ರಗಳಲ್ಲಿ ಪ್ರಥಮ ಧೂಮಕೇತು ಕಂಡರೆ ಪ್ರಪಂಚಕ್ಕೆ ಪ್ರಪಂಚವೇ ತಳಮಳಗೊಳ್ಳುವದು. ಉಳಿದ ನಕ್ಷತ್ರಗಳಲ್ಲಿ ಉದಯವಾದರೆ ಜಗತ್ತು ಸುಖ ಶಾಂತಿಯಿಂದ ಬಾಳುತ್ತದೆ.

## ಬಾಲಚುಕ್ಕಿ ವಿಚಾರ

ಬಾಲಚುಕ್ಕಿಗಳೆಂಬುವು ಕೆಲವು ಕಾಲಗಳಲ್ಲಿ ಹುಟ್ಟಿ ಕೆಲವು ಕಾಲದಲ್ಲಿ ಗತಿಸುವುವಲ್ಲವು. ಸಮಸ್ತ ನದಿಗಳು ಸಾಗರವನ್ನು ಹೇಗೆ ಸೇರುವವೋ ಹಾಗೆಯೇ ಎಲ್ಲಾ ನಕ್ಷತ್ರಗಳೂ ಸೂರ್ಯನನ್ನು ಆಶ್ರಯಿಸಿಕೊಂಡು ಅ ಬಿಂಬದ ಸುತ್ತಲ್ಲೂ ತಿರುಗುತ್ತಿರುವವು. ಬಾಲಚಿಕ್ಕೆಯ ಗತಿಯು –ಮಾರ್ಗವು– ಗ್ರಹಗಳ ರೀತಿಯಂತೆ ಗುಂಡಾಗಿರದೆ ಸವತೇಕಾಯಿಯಂತೆ ನಸುನೀಳವಾಗಿರುವದು. ಇದ್ದರಿಂದ ಅದರದರ ಸ್ಥಳದಿಂದ ಅವು ಸೂರ್ಯನನ್ನು ಸುತ್ತಿ ಬರುವದಕ್ಕೆ ಅವು ಸಂಚರಿಸುವ ಸ್ಥಳಗಳ ದೂರ ಮುಂತಾದವುಗಳನ್ನು ಅನುಸರಿಸಿದ ವೇಗವು ಒಂದು ಮೂರು ವರ್ಷಕ್ಕೊ

ಮತ್ತೊಂದು ಮೂವತ್ತು ವರ್ಷಕ್ಕೊ ಇನ್ನೊಂದು ಮುನ್ನೂರು ವರ್ಷಕ್ಕೊ ಮತ್ತೊಂದು ಸಾವಿರಾರು ವರ್ಷಕ್ಕೊ ಇನ್ನೂ ಕೆಲವು ಲಕ್ಷಾಂತರ ವರ್ಷಕ್ಕೂ ಒಂದು ಸಾರಿ ಸುತ್ತುತ್ತಿರುವವು ಎಂದು ಕಾಲ ಬಲ್ಲವರು ಹೇಳುವರು ಬಾಲಚಿಕ್ಕೆಗಳ ಬಾಲವು ಸಾವಿರಾರಂತರ ಅಥವಾ ಲಕ್ಷಾಂತರ ಗಟ್ಲೆ ಮೈಲುಗಳಷ್ಟು ನಿಳವಗಾರುವವು. ಕೆಲವಕ್ಕೆ ಒಂದು ಮತ್ತೆ ಕೆಲವಕ್ಕೆ ಎರಡು ಮೂರು ಆರು ಬಾಲಗಳಿರುವವು. ಆರು ಬಾಲವಿರುವ ಬಾಲಚಿಕ್ಕೆಯೂ ೧೫೦ ವರ್ಷ೦ಳ ಹಿಂದೆ ಒಂದಾನೊಂದು ಕಾಲದಲ್ಲಿ ಕಾಣಿಸಲ್ಪಟ್ಟಿತ್ತಂತೆ ಎಪ್ಪತ್ತಾರು ವರ್ಷಗಳಿಗೊಮ್ಮೆ ಬರುವ ಬಾಲಚಿಕ್ಕೆಯು ಕ್ರಿ. ಶ. ೧೯೧೧ ನೇ ಇಸ್ವಿಯಲ್ಲಿ ಕಾಣಿಸುವದೆಂದು ಹೇಳಿದ್ದು ಆಗಿಹೋಗಿದೆ ಕೆಲವು ಬಾಲಚಿಕ್ಕೆಗಳು ನಮಗೆ ಕಾಣದೆ ಆಕಾಶದಲ್ಲಿ ಸಂಚರಿಸುತ್ತಿರುವವು ಈ ಚಿಕ್ಕೆಗಳು ಇಷ್ಟು ಮಂದಗತಿಯಿಂದ ತಿರುಗುತ್ತಿರುವದರಿಂದಲೂ . ನಮ್ಮ ದಿಕ್ಪಥಕ್ಕೆ ಬಾರದೆ ಇರುವದರಿಂದಲೂ ಮನುಷ್ಯನ ಆಯುಷ್ಯ ಸ್ವಲ್ಪವಾಗಿರುವದರಿಂದಲೂ ಒಬ್ಬರ ಕಾಲದಲ್ಲಿ ನೋಡಿರುವಂಥ ಬಾಲಚಿಕ್ಕೆಯು ಇನ್ನೊಬ್ಬರ ಕಾಲದಲ್ಲಿ ಕಾಣದಂತಾಗಿದೆ. ಕೆಲವು ವರ್ಷ ನಂತರ ಯಾರೂ ನೋಡದಿರುವ ಬಾಲಚಿಕ್ಕೆಯು ನಮ್ಮ ದೃಷ್ಟಿಗೆ ಬಿದ್ದರೆ ಅದು ಜಗತ್ತಿನ ಭಯ ಸೂಚಕವೆಂದು ತಿಳಿಯಲಾಗುವದು. ಒಂದೊಂದು ವಿಧದ ವಾಯು ಜಲನೆಯಿಂದ ಶೀತೋಷ್ಣಗಳು ಬದಲಾಯಿಸಿ ಬರ ರೋಗೋಪ ದ್ರವಗಳನ್ನು ತರುವವು. ಇಂಥಾದ್ದೊಂದು ಬಾಲಚುಕ್ಕಿಯು ೧೯೪೦ ನೇ ಇಸ್ವಿಯಲ್ಲಿ ೧೦ ದಿನ ಕಾಣಿಸಿಕೊಂಡು ಅದೃಶ್ಯವಾಯಿತು ಬಾಲಚಿಕ್ಕೆ ಪೂರ್ವ ದಿಕ್ಕಿನಲ್ಲಿ ಉದಯವಾದರೆ ದೇಶದ ದೊರೆಯು ತೀವ್ರದಿಂದ ಮರಣಹೊಂದಿ ಪ್ರಜೆಗಳು ಅನಂತ ಕಷ್ಟಕ್ಕೀಡಾಗುವರು. ಅಗ್ನಿ ದಿಕ್ಕಿನಲ್ಲಿ ಕಂಡರೆ ಜಗತ್ತಿಗೆ ದೊಡ್ಡ ಬರ ಬೀಳುವದು. ದಕ್ಷಿಣ ದಿಕ್ಕಿನಲ್ಲಿ ಮೂಡಿದರೆ ರಣ ಕಾಳಗ ಯುದ್ಧವಾಗುವದು. ನೈಋತ್ಯ ದಿಕ್ಕಿನಲ್ಲಿ ಮೂಡಿದರೆ ಮಹಾ ವಿಷದ ಗಾಳಿ ಬೀಸಿ ಪ್ರಜೆಗಳು ಸಾಯುವರು. ಪಶ್ಚಿಮ ದಿಕ್ಕಿನಲ್ಲಿ ಕಂಡರೆ ಲೋಕದ ಸಂಪತ್ತೆಲ್ಲಾ ಹಾಳಾಗುವದು. ವಾಯವ್ಯ ದಿಕ್ಕಿನಲ್ಲಿ ಕಂಡರೆ ಮಹಾ ಬಿಸಿಲಿನ ತಾಪದಿಂದ ಮಳೆ ಬೆಳೆ ನಾಶವಾಗಿ ಲೋಕವೆಲ್ಲಾ ದುಃಖದಿಂದ ನರಳುವದು ಉತ್ತರ ದಿಕ್ಕಿನಲ್ಲಿ ಕಂಡರೆ ಬರ ಮರಣದಿಂದ ರಾಜ ಪ್ರಜರು

ಹಾಳಾಗುವದು. ಈಶಾನ್ಯ ದಿಕ್ಕಿನಲ್ಲಿ ಮೂಡಿದರೆ ಲೋಕವೆಲ್ಲ ತಲ್ಲಣಿಸು ವಂಥ ಆಪತ್ತು ಸಂಭವಿಸುವದು. ಆಕಾಶದಲ್ಲಿ ಮಧ್ಯದಲ್ಲಿ ಮೂಡಿದರೆ ಮಳೆ ಬೆಳೆ ಇಲ್ಲದ ದೊಡ್ಡ ಬರ ಬರುವದು. ಕೆಂಪು ಕಪ್ಪು ಬಾಲಚಿಕ್ಕೆ ಬಹಳ ಅನಿಷ್ಟವಾದುದು. ಬಿಳುಪು ಹಸಿರು ಬಣ್ಣದ ಬಾಲಚಿಕ್ಕೆ ಶಾಂತಿಯಾದುವು. ೧-೩-೬ ಬಾಲದ ಚಿಕ್ಕೆ ಕಂಡರೆ ಮಹಾಪ್ರಳಯ ಉಂಟಾಗುವದು. ೨-೪-೫ ಬಾಲದ ಚಿಕ್ಕೆ ಕಂಡರೆ ಮಳೆ ಬೆಳೆ ನಾಶದಿಂದ ಲೋಕವು ತಳ ಮಳಗೊಳ್ಳುವದೆಂದು ಬೃಹತ್ ಸಂಹಿತಾದಿ ಗ್ರಂಥಗಳಲ್ಲಿ ಹಿಂದಿನ ಕಾಲ ಜ್ಞಾನಿಗಳು ಹೇಳಿರುವರು.

## ಪ್ರತಿ ವರ್ಷದ ಸುಖ ದುಃಖದ ತೆರೆಮರೆ

ಯುಗಾದಿ ಪ್ರತಿಪಾಡ್ಯ ಆದಿತ್ಯವಾರ ಬಂದರೆ ಬಿಸಿಲಿನ ತಾಪ, ಅರ್ಧ ಮಳೆ-ಬೆಳೆ, ಅಧಿಕವಾದ ಗಾಳಿಯು, ಸೋಮವಾರ ಬಂದರೆ ಮಳೆ-ಬೆಳೆ ಸಮೃದ್ಧಿಯು, ಮಂಗಳವಾರ ರೋಗ-ರುಜಿನು ಮಳೆ-ಬೆಳೆ ಅಲ್ಪ, ಬುಧ ವಾರ ಬಂದರೆ ಮಳೆ—ಬೆಳೆ ಸಮೃದ್ಧಿಯು, ಗುರುವಾರ ಬಂದರೆ ವಿಶೇಷ ಮಳೆ ಗಾಳಿಯಿಂದ ಫಲ ಪೈರು ಉತ್ತಮವಾಗುವವು. ಶುಕ್ರವಾರ ಬಂದರೆ ಮಳೆ-ಬೆಳೆ ಸುಖವು. ಹಿಂಗಾರಿ ಉತ್ತಮ ಶನಿವಾರ ಬಂದರೆ ಗಾಳಿ ಅಧಿಕ ಯುದ್ಧ ಭಯ ಮಳೆ ಬೆಳೆ ಅರ್ಧಂಬರ್ಧ ಉಂಟಾಗುವುದೆಂದು ತಿಳಿಯ ಬೇಕು.

## ಪ್ರತಿವರ್ಷ ಮಳೆವಾರನ್ನು ತಿಳಿಯುವ ಬಗೆ

ಅಶ್ವಿನಿ ಮಳೆ ಆದಿತ್ಯವಾರ ಬಂದರೆ ಮಳೆ-ಬೆಳೆ ಸಮೃದ್ಧಿ, ಹಿಂಗಾರಿ ಉತ್ಕೃಷ್ಟವು, ಸೋಮವಾರ ಅಶ್ವಿನಿ ಮಳೆ ಪ್ರಾರಂಭವಾದರೆ ರಾಜ ಪ್ರಜರು ಸುಖವಂತರು- ಪೈರು ಉತ್ಕೃಷ್ಟವಾಗುವದು. ಮಂಗಳವಾರ ಅಶ್ವಿನಿ ಮಳೆ ಪ್ರಾರಂಭಿಸಿದರೆ ರಾಜ ಪ್ರಜರ ಕಲಹ ಯುದ್ಧ ಭೀತಿ ಮರಣ ಮಾರಿ ಉಪದ್ರವವು. ಬುಧವಾರ ಅಶ್ವಿನಿ ಮಳೆ ಪ್ರಾರಂಭವಾದರೆ ಧನ ಕನಕಾದಿ ವಸ್ತುವಾಹನಾದಿ ಸೌಖ್ಯವು, ಮಳೆ—ಬೆಳೆ ಉತ್ಕೃಷ್ಟವು, ಗುರುವಾರ ಅಶ್ವಿನಿ ಮಳೆ ಪ್ರಾರಂಭಿಸಿದರೆ ಮಳೆ-ಬೆಳೆ ಉತ್ಕೃಷ್ಟ ಹಿಂಗಾರಿ

ಮುಂಗಾರಿ ಸಮನಾಗಿ ಬೆಳೆಯಾಗುವದು. ಶುಕ್ರವಾರ ಅಶ್ವಿನಿ ಮಳೆ ಪ್ರಾರಂಭಿಸಿದರೆ ಮಳೆ ಮಾರಾಟದಿಂದ ಪ್ರಜರು ಸುಖಭರಿತರಾಗುವರು. ಶನಿವಾರ ಅಶ್ವಿನಿ ಮಳೆ ಪ್ರಾರಂಭಿಸಿದರೆ ಮರಣ ಮಾರಿರೋಗ ಪಶು ನಷ್ಟ ಮಳೆ –ಬೆಳೆ ಅರ್ಧಂಬರ್ಧಂವಾಗುವದು.

ರಾತ್ರಿ ಅಶ್ವಿನಿ ಮಳೆ ಪ್ರಾರಂಭಿಸಿದರೆ ಅರ್ಧಂಬರ್ಧ ಮಳೆ-ಬೆಳೆ ಉಂಟಾಗಿ ಮುಂಗಾರಿ ಸಮೃದ್ಧಿಯು. ಹಗಲು ಅಶ್ವಿನಿ ಮಳೆ ಪ್ರಾರಂಭಿಸಿದರೆ ಹಿಂಗಾರಿ ಮಳೆ—ಬೆಳೆ ಸಮೃದ್ಧಿಯು. ಆದಿತ್ಯವಾರ ಮೃಗಪಂಚಕ ಮಳೆ ಪ್ರಾರಂಭಿಸಿದರೆ ಒಳ್ಳೆ ಮಳೆ-ಬೆಳೆ, ಸೋಮವಾರ ಮೃಗಪಂಚಕ ಉದಯ ರೋಗ ಭಯ, ಬುಧವಾರವಾದರೆ ಯಥೇಷ್ಟ ಮಳೆ-ಬೆಳೆ, ಗುರುವಾರ ವಾದರೆ ಮಳೆ ಮಾರಾಟ ಸುಖವು. ಶುಕ್ರವಾರವಾದರೆ ಧನ ಧಾನ್ಯ ಸಮೃದ್ಧಿಯು. ಶನಿವಾರವಾದರೆ ಚೋರ ಭಯ ಅಗ್ನಿ ಭಯ ಉಂಟಾಗುವ ದೆಂದು ತಿಳಿಯಬೇಕು. ಮೃಗಪಂಚಕ ಮತ್ತು ಮಜಪಂಚಕವೆಂದು ಮಳೆ ಗಾಲವು ಪ್ರತಿವರ್ಷ ನಡೆಯಲ್ಪಡುವವು.

–ಃ ಶ್ಲೋಕ ಃ–

ನತ್ವಾ ಕಾತ್ಯಾಯಿನೀ ಕಾಂತಂ ಕಾಲಕಾಲಂ ಕೃಪಾನಿಧಿಂ |
ವಕ್ಷ್ಯಾಮಿ ಕಾಲಜ್ಞಾನಂಚಃ ಕಲಿಕಾಲ ವಿಲಾಸಿನಂ |

ಶ್ರೀ ಶಿವನು ಕಾತಾಯಿನಿಯಾದ ಗೌರೀ ದೇವಿಗೆ ಬ್ರಹ್ಮನಾರದರು. ಕಲಿಧರ್ಮವನ್ನು ಕುರಿತು ಮಾತನಾಡಿದುದನ್ನು ಶ್ರೀದೇವಿಗೆ ಬೋಧಿಸಿದ ವಿಷಯವನ್ನು ಉಲ್ಲೇಖಿಸಲು ಪ್ರಥಮತಃ ಪರಮಾತ್ಮನಿಗೆ ನಮಸ್ಕರಿಸಿ ವಿವರಿಸುವೆನು.

–ಃ ಶ್ಲೋಕ ಃ–

ಕಲೌಪಂಚ ಸಹಸ್ರಾಂತೇ | ಜಾಯತೇ ವರ್ಣಸಂಕರಃ |
ಕಲೌಪಂಚ ಸಹಸ್ರಾಂತೇ | ವಿಷ್ಣುಸ್ತ್ಯಕ್ಷತಿ ಮೇದಿನಿಂ |

ಹೇಪಾರ್ವತಿದೇವಿಯೇ ಕೇಳು, ಕಲಿಯುಗದ ಮೊದಲನೆಯ ಪಾದ ದಲ್ಲಿ ೫೦೦೦ ವರ್ಷಗಳ ಅಂತ್ಯದಲ್ಲಿ ಜಾತಿ ಮತಗಳ ಸಂಕಾರ್ಯವಾಗುವು ದೆಂತಲೂ ಪ್ರಪಂಡ ಪಾಲಕನಾದ ಶ್ರೀಮನ್ನಾರಾಯಣನು ಭೂಮಂಡಲ ವನ್ನು ಬಿಡುವನೆಂತಲೂ ನಾರದರಿಗೆ ಬ್ರಹ್ಮದೇವನು ಹೇಳಿದುದನ್ನೇ ನಿನಗೆ ನಾನು ಹೇಳೇವೆನು.

ಸತ್ಯಲೋಕದಲ್ಲಿ ಒಂದು ದಿನ ಬ್ರಹ್ಮದೇವನು ವಾಣಿದೇವಿಯ ಸಮೇ ತನಾಗಿ ಸಮಸ್ತ ದೇವತೆಗಳಿಂದಲೂ ಸುತಿಸಿಕೊಳ್ಳುತ್ತಾ ಸಿಂಹಾಸನದಲ್ಲಿ ಕುಳಿತಿರಲು ಮುನಿಶ್ರೇಷ್ಟನೂ ವೀಣಾಧರನೂ ಆಗಿರುವ ನಾರದನು ಅಲ್ಲಿಗೆ ಬಂದು ಬ್ರಹ್ಮನಿಗೆ ನಮ್ಕರಿಸಿ ಕುಳಿತುಕೊಂಡು ಎಲೈ ಬ್ರಹ್ಮನೇ ನಿನ್ನಿಂದ ಕೃತತ್ರೇತಾ ದ್ವಾಪರ ಯುಗಗಳ ಮಹಿಮೆಯನ್ನು ಕೇಳಿದೆನು. ಆದರೆ ಈಗ ಕಲಿಯುಗದ ಮಹಿಮೆಯನ್ನು ಕೇಳಬೇಕೆಂದು ಆಸೆಯುಂಟಾಗಿದೆ. ಎಂದು ಪ್ರಾರ್ಥಿಸಲು ಬ್ರಹ್ಮನು ನಾರದನನ್ನು ಕುರಿತು ಕಲಿಯುಗದ ಧರ್ಮವನ್ನು ಹೇಳಿದನೆಂದು ಸೂತನು ಶೌನಕಾದಿ ಮುನಿಗಳಿಗೆ ಹೇಳಿದನು.

ಎಲೌ ಶೌನಕಾದಿ ಮುನಿಗಳಿರಾ ಕಲಿಯುಗದಲ್ಲಿ ಕಲಿ ಪ್ರಾಬಲ್ಯ ದಿಂದ ಧರ್ಮಸತ್ಯಾದಿಗಳು ನಾಶವಾಗಿ ಪಾಪಗಳು ಅಭಿವೃದ್ಧಿಯಾಗಿ ಬ್ರಹ್ಮಹತ್ಯೆ, ಶಿಶುಹತ್ಯೆ, ಭ್ರೂಣ ಹತ್ಯೆ, ಮಾತಾಪಿತೃ ಹಿಂದೆ, ಸ್ವಾಮಿ ಗುರು ಭ್ರಾತೃ ಮಿತ್ರದ್ರೋಹಗಳೂ ಸ್ವರ್ಣಸ್ತೇಯ ಮಧ್ಯ ಮಾಂಸಾದಿ ಭಕ್ಷಣಗಳು ಇನ್ನೂ ನಾನಾ ವಿಧವಾದ ಮಹಾ ಪಾಪಕೃತ್ಯಗಳನ್ನಾಚರಿ ಸುತ್ತಾ ಜನರು ವ್ಯಭಿಚಾರಿಗಳಾಗಿ ಮತಧರ್ಮಗಳನ್ನು ಬಿಟ್ಟು ಕಾಮ ಕ್ರೋಧ, ಲೋಭ, ಮೋಹ, ಶೋಕ ಭ್ರಾಂತಿ ಪರವಶರಾಗಿ ಹರಿಹರ ಬ್ರಹ್ಮಾದಿಗಳ ಭಕ್ತಿಯನ್ನು ಕೊರೆದು ಶಾಂತಿ ದಯಾ ಮರ್ಯಾಜಿತರಾಗಿ ದುರ್ಮಾರ್ಗದಲ್ಲಿ ಪ್ರವೇಶಿಸುತ್ತಿರಲೂ ಕಲಿಪುರುಷನು ಅತ್ಯಾನಂದದೊಡನೆ ತಾನು ಸಕಲ ಲೋಕಗಳನ್ನು ಮೋಹಿಸಿರಲು ಲೋಕದವರು ಧರ್ಮಾದಿ ಗಳನ್ನು ಬಿಟ್ಟು ಪಾಪಮಾರ್ಗ ನಿರತರಾಗಿರುವರು. ಕಲಿಯು ಹೀಗೆ ಪ್ರಬಲ ವಾಗಿಲು ಧರ್ಮಪುರುಷನು ಖಿನ್ನನಾಗಿ ವನಗುಹಾದಿಗಳನ್ನು ರಹಸ್ಯದಿಂದ

ನದಿ ದೇವಾಲಯ ಮೂಲಗಳನ್ನು, ತುಳಸೀ ಪದ್ಮವನಗಳನ್ನು ಗಂಗಾದಿ ಜಲಸ್ಥಲಗಳಲ್ಲಿ ಭೇದಿಸಲಾಗದ ಸ್ಥಳವನ್ನು ಹೊಕ್ಕು, ಕಲಿಭೀತಿಯಿಂದ ಅಡಗಿಕೊಳ್ಳಲು ಕಲಿಯು ಸ್ವಪ್ರಕಾಶವನ್ನು ಹೆಚ್ಚಿಸುವನು. ಘೋರ ಪಾಪಿಗಳೇ ಜನಿಸಿ ಧರ್ಮವನ್ನು ನಿರಾಕರಿಸುತ್ತ ಬರಲು ಯಜ್ಞಯಾಗಾದಿ ಸತ್ಕರ್ಮಗಳಿಲ್ಲದಂತಾಗಿ ಭೂಭಾರವು ಹೆಚ್ಚುವದು. ಆಗ ಭೂದೇವಿಯು ಬಾಧೆಯನ್ನು ಸಹಿಸಲಾರದೆ ಭೀತಿಯಿಂದ ಗೋರೂಪಧಾರಳಾಗಿ ಅನೇಕ ದೇವತೆಗಳಿಂದೊಡಗೂಡಿ ಸಭಾಸೀನನಾದ ಇಂದ್ರನ ಬಳಿಗೆ ಹೋಗಲೂ ಅಲ್ಲಿದ್ದ ದೇವತೆಗಳು ಭಯಕ್ರಾಂತರಾದರು.

ಇಂದ್ರನು ಪೀಠದಿಂದಿಳಿದು ಬಂದು ಭೂದೇವಿಯನ್ನು ಮೇಲಕ್ಕೆತ್ತಿ ಸಂತೈಸಿ ಎಲೈ ತಾಯೆ ಏಕೆ ಶೋಕಿಸುವಿ, ನಿನ್ನಾಂಗಗಳು ಕುಂದಲು ಕಾರಣವೇನು ಎನ್ನಲು ಭೂದೇವಿಯು ಎಲೈ ಇಂದ್ರನೇ ಭೂಲೋಕವಲ್ಲಿ ಜನರು ಸ್ವಧರ್ಮವನ್ನು ಬಿಟ್ಟು ಯಜ್ಞಯಾಗಾದಿರಹಿತರಾಗಿಯೂ ಜಾರ ಚೋರತನದಿಂದ ನಿತ್ಯ ಕರ್ಮಾನುಷ್ಟಾನವನ್ನು ಬಿಟ್ಟು ದುರ್ಮಾರ್ಗ ಪ್ರವರ್ತಕರಾಗಿಯೂ ಇರುವದರಿಂದ ಅವರ ಭಾರವನ್ನು ತಾಳಲಾರದೆ ನಿನ್ನ ಬಳಿಗೆ ಬಂದೆನೆನ್ನಲು ಇಂದ್ರನು ಚಿಂತಾಕ್ರಾಂತನಾಗಿ ಏನೂ ತೋರದೆ ದೇವತೆಗಳಿಂದಲೂ ಭೂದೇವಿಯಿಂದಲೂ ಕೂಡಿ ಸತ್ಯಲೋಕವನ್ನು ಸೇರಿ ಬ್ರಹ್ಮನಿಗೆ ನಮಸ್ಕರಿಸಿ ಸ್ತುತಿಸಿ ಭೂದೇವಿಯ ದುಃಖವನ್ನೂ ದೇವತೆಗಳಿಗುಂಟಾಗಿರುವ ಭೀತಿಯನ್ನು ಬಿನ್ನವಿಸಲು ಆ ಬ್ರಹ್ಮನು ಚಿಂತಿಸಿದವನಾಗಿ ಇಂದ್ರಾದಿಗಳೊಡನೆ ಕೈಲಾಸವನ್ನು ಹೊಕ್ಕು ಗೌರೀ ಸಮೇತ ಶಂಕರನನ್ನು ಕುರಿತು ಕೈ ಜೋಡಿಸಿಕೊಂಡು ಎಲೈ ಲೋಕ ರಕ್ಷಕನಾದ ಶಂಕರನೇ ರಕ್ಷಿಸು ಎಂದು ಬಹು ವಿಧದಿಂದ ಪ್ರಾರ್ಥಿಸಲು ಪರಮೇಶ್ವರನು ಬ್ರಹ್ಮೇಂದ್ರಾದಿಗಳ ಕಾರ್ಯವನ್ನು ತಿಳಿದು, ಅವರೊಡನೆ ವೈಕುಂಠವನ್ನು ಪ್ರವೇಶಿಸಿ ಲಕ್ಷ್ಮೀಲೋಕನಾದ ಶ್ರೀ ಮಹಾವಿಷ್ಣುವನ್ನು ಕಂಡು ಸ್ತುತಿಸಲು ವಿಷ್ಣುವು ಪರಮೇಶ್ವರನನ್ನು ಸತ್ಕರಿಸಿ ಉಚಿತಾಸನದಲ್ಲಿ ಕುಳ್ಳಿರಿಸಿ ದೇವತೆಗಳ ಕುಶಲವನ್ನು ವಿಚಾರಿಸಲು ಇಂದ್ರಾಜ್ಞೆಯಿಂದ ಮುಂಭಾಗದಲ್ಲಿ ಅಂಜಲೀಬದ್ಧಳಾಗಿ ಶೋಕಿಸುತ್ತ ನಿಂತಿರುವ ಭೂದೇವಿಯ ದುಃಖವನ್ನು

ವಿಚಾರಿಸಿ ತಿಳಿದುಕೊಂಡು ಮಂದಹಾಸದಿಂದ ಪರಮೇಶ್ವರನನ್ನು ನೋಡಿ ಇದಕ್ಕೆ ತಕ್ಕ ಉಪಾಯವೇನು ಈಗ ಮಾಡಬೇಕೆಂದು ಕೇಳಲು ಅದಕ್ಕೆ ಪರಶಿವನು ತನ್ನ ಅಭಿಪ್ರಾಯವನ್ನು ತಿಳಿಸಿದನು. ಬ್ರಹ್ಮಾದಿಗಳು ಅದಕ್ಕೆ ಒಪ್ಪಿದರು. ಶ್ರೀ ಹರಿಯು ಭೂದೇವಿಯನ್ನು ನೋಡಿ ಅಮ್ಮಾ ಭೂಭಾರವನ್ನು ಇಳಿಸುವದಕ್ಕಾಗಿ ದುಷ್ಟರನ್ನು ನಾಶ ಮಾಡಿ ಧರ್ಮವನ್ನುದ್ಧರಿಸಿ ನಿನ್ನನ್ನು ಸಂತೋಷಪಡಿಸುವೆನು ಎಂದು ಸಂತೈಸಿ ಕಳುಹಿಸಿ ಬ್ರಹ್ಮನನ್ನು ಕುರಿತು ಇಂತೆಂದನು.

ಎಲೈ ಬ್ರಹ್ಮದೇವನೇ ಕಲಿಯುಗದಲ್ಲಿ ೫೦೦೦ ವರ್ಷದ ಮೇಲೆ ಅತಿಯಾಗಿ ಹೆಚ್ಚಿ ಮೆರೆಯುತ್ತಾ ಭೂಭಾರವಾಗಿರುವ ದುಷ್ಟರನ್ನು ಸಂಹರಿಸಿ ಭೂಭಾರವನ್ನು ತಗ್ಗಿಸುವದಕ್ಕಾಗಿ ಅವತರಿಸುವೆನು ಆಗ ರುದ್ರಾಂಶಗಳಾದ ರೋಗ ಪೀಡಾದಿಗಳು ಹೆಚ್ಚಲಿ, ಘೋರವಾದ ಕ್ಷಾಮಾದಿಗಳುಂಟಾಗಲೀ ಇಂದ್ರನು ಅವನ ಅಧೀನದಲ್ಲಿರುವ ಗ್ರಹಗಳೂ ಸೇರಿ ಭೂಲೋಕದಲ್ಲಿರುವ ಸತ್ಯಧರ್ಮಗಳನ್ನು ಸೆಳೆದು ಭೂಮಿಯನ್ನು ನಿಸ್ಸಾರವಾಗಿ ಮಾಡಿ ಭೂಭಾರವನ್ನು ತಗ್ಗಿಸುವದಕ್ಕಾಗಿ ನಾನು ಮಾಡುವ ಕಾರ್ಯಕ್ಕೆ ಸಹಾಯಕರಾಗಿರಲಿ ಎಂದು ಹೇಳಿ ಎಲ್ಲರನ್ನು ಕಳುಹಿಸಿ ಆಮೇಲೆ ತಾನು.—

—ಃ ಶ್ಲೋಕ ಃ—

ಯದಾ ಯದಾಯಿ | ಧರ್ಮಸ್ಯಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನಮ ಧರ್ಮಸ್ಯಕದಾತ್ಮನಂ ಸೃಜಾಮ್ಯಹಂ |

ಎಂಬ ವಚನದಂತೆ ಯಾವ ಯಾವ ಕಾಲದಲ್ಲಿ ಅಧರ್ಮ ಹೆಚ್ಚುವದೋ ಆಯಾ ಕಾಲದಲ್ಲಿ ಅವತರಿಸಿ ಸಕಲ ರೂಪಿನಿಂದ, ಭೂಭಾರವನ್ನು ತಗ್ಗಿಸುವೆನು ಇನ್ನು ನೀವು ತೆರಳಿರೆಂದು ಅನುಜ್ಞೆಯನ್ನು ಕೊಡಲು ಸರ್ವರೂ ತಮ್ಮ ತಮ್ಮ ಕಾರ್ಯಗಳನ್ನು ನಿರ್ವಹಿಸಲೋಸುಗ ಇಂದ್ರನ ಗುರುವಾದ ಬೃಹಸ್ಪತ್ಯಾಚಾರ್ಯರನ್ನು ಕರೆಯಿಸಿ ಪೂಜಿಸಿ ಗುರುವೇ ಶ್ರೀ ವಿಷ್ಣುವಿನ ಅನುಜ್ಞೆಯಂತೆ ಭೂಭಾರವನ್ನು ತಗ್ಗಿಸಲು ತಕ್ಕ ಉಪಾಯವನ್ನು ಮಾಡಬೇಕೆನ್ನಲು ಗುರುವು ಎಲ್ಲ[illegible] ಸಿದ್ಧವಾಗಿರುವುದೆಂದನು.

ಎಲೌ ಸಭಾ ನಾಯಕರೇ ಭೂಭಾರ ನಿವಾರಣೆಯ ಕೃತ್ಯವೂ ನಮ್ಮೆಲ್ಲರಿಗೂ ಸೇರಿರುವದರಿಂದ ನೀವೆಲ್ಲರೂ ನಿಮ್ಮ ನಿಮ್ಮ ಕಾರ್ಯನಿತರರಾಗಬೇಕೆಂದು ಹೇಳಿ ಪರ್ಜ್ಯನನ್ನು ಕುರಿತು ಎಲೈ ಮೇಘಾದಿಪತಿಯೇ ||ಶ್ಲೋಕ||

(ಅನ್ನಂಹಿ ಸರ್ವದಾನ್ನೃಣಾಂ ಪ್ರಣಾಧಾರಣ ಕಾರಣಂ)

ಎಂಬಂತೆ ಮನುಷ್ಯರಿಗೆ ಅನ್ನವೇ ಪ್ರಾಣಾಧಾರಣಕ್ಕೆ ಕಾರಣವಾಗಿರುವದರಿಂದ ನೀನು ಕಲಿಯುಗದ ಒಂದನೇ ಪಾದಪಲ್ಲಿ ೫೦೦೦ ವರ್ಷಗಳು ಕಳೆಯುವುದರೊಳಗಾಗಿ ದುರ್ಮುಖಿ ನಾಮ ಸಂವತ್ಸರದ ಮದ್ಯಕಾಲದಿಂದ ಶಾರ್ವರಿ ನಾಮ ಸಂವತ್ಸರದ ಪರ್ಯಂತವೂ ಈ ಕಲಿಯುಗದಲ್ಲಿ ಅಧರ್ಮವು ಪ್ರಬಲವಾಗುವದರಿಂದ ಆಗಾಗ ಕ್ಷಾಮಾದಿಗಳುಂಟಾಗುವಂತೆ ಭೂಮಿಯ ಸಾರವನ್ನು ಸೆಳೆದು ಕೆಲಕಾಲದಲ್ಲಿ ವರ್ಷಗಳು [ಮಳೆ] ವರ್ಷಿಸದಂತೆಯೂ ನದೀ ನದಗಳಲ್ಲಿಯೂ ಕೆರೆಭಾವಿಗಳಲ್ಲಿಯೂ ನೀರಿಲ್ಲದಂತೆ ಮಾಡಿ ಕೆಲವೆಡೆ ವೃಷ್ಟಿರಹಿತವಾಗಿಯವ ಕೆಲವೆಡೆ ಅತಿವೃಷ್ಟಿಯಿಂದ ಪಟ್ಟಣಗಳನ್ನು ಮುಳುಗಿಸುತ್ತಲೂ ದುರುಳಿರುವ ಸ್ಥಳದಲ್ಲಿ ಸಿಡಿಲಿನಿಂದಲೂ, ಖಂಡಾವೃಷ್ಟಿಗಳಿಂದಲೂ ದುಷ್ಟರನ್ನು ನಿಗ್ರಹಿಸಿ ಧರ್ಮವನ್ನುದ್ಧರಿಸಿರೆಂದು ಆಜ್ಞಾಪಿಸಿದನು. ಚಂಡಮಾರುತವನ್ನು ನೋಡಿ, ಎಲೈ ವಾಯುವೇ ನೀನು ಸೊಂಟರಗಾಳಿಯಿಂದ ಗಿರಿಗುಡ್ಡಗಳು ಒಡೆಯುವಂತೆ ಬೀಸುತ್ತಲೂ ಧೂಳುಗಳಿಂದ ಸಮಸ್ತವನ್ನು ವ್ಯಾಪಿಸುತ್ತಲೂ ಮನೆಮಾರಗಳನ್ನು ಕೆಡುವುತ್ತಲೂ ದುಷ್ಟರನ್ನು ನಾಶಪಡಿಸೆಂದು ಆಜ್ಞೆಗೈದನು. ಎಲೌ ನವಗ್ರಹಗಳಿರಾ ನೀವು ಕಲಿಯುಗದ ಪ್ರಥಮ ಪಾದದಲ್ಲಿ ೫೦೦೦ ವರ್ಷಗಳು ಕಳೆದ ಮೇಲೆ ವಿಕಾರಿನಾಮ ಸಂವತ್ಸರದ ಕಾರ್ತಿಕ ಬಹುಳ ೧೩ ರಿಂದ ಮಾರ್ಗಶಿರ ಶುಕ್ಲ ೧ ರ ಪರ್ಯಂತರವೂ, ಎಲೈ ಸೂರ್ಯ ಚಂದ್ರ ಅಂಗಾರಕ ಬುಧ ಗುರು ರಾಹುಗಳೇ ನೀವು ಆರು ಗ್ರಹಗಳು ಮಾತ್ರ ಕ್ರೂರ ಗ್ರಹಾಧಿಪತ್ಯದಿಂದ ವೃಶ್ಚಿಕ ಶಾಶಿಯನ್ನು ಪ್ರವೇಶಿಸಿರಿ. ವೃಶ್ಚಿಕ ರಾಶಿಯಲ್ಲಿ ಎರಡು ಗ್ರಹಗಳ ಯೋಗವು ಸಂಭವಿಸಿದರೆ ರಾಜಕ್ಷೋಭೆ ಮತ್ತು ಪ್ರಜಾಕ್ಷೋಭೆಯೂ ಆಗುವದು ಮೂರು ಗ್ರಹಗಳ ಯೋಗದಿಂದ ಕ್ಷೋಭೆ ಅನರ್ಥ ಅಪಘಾತ ಉಂಟಾಗಿ ಪ್ರಜಾನಾಶವಾಗ

ವದು. ಚತುರ್ಥ ಪಂಚಗ್ರಹಗಳ ಯೋಗದಿಂದ ಸರ್ವಲೋಕ
ಆಪತ್ತು ವಿಪತ್ಪರಂಪರೆಗಳಿಂದ ಬಳಲುವದು. ಅಷ್ಟಗ್ರಹಯೋಗದಿಂದ ರಾಜಪ್ರಜರು ಪ್ರಳಯಕ್ಕೀಡಾಗುವರು. ಸಪ್ತಗ್ರಹಗಳ ಯೋಗದಿಂದ ಜರ ಮರಣಗಳಿಂದಲೂ ಯುದ್ಧದಿಂದಲೂ ಅಸಂಖ್ಯಾತ ಪ್ರಜರಾಜ ಮಡಿಯುವರು. ಷಷ್ಟಗ್ರಹಯೋಗದಿಂದ ಜಗತ್ತು ಜ್ವರಮಾರಿ ವೃಷ್ಟಿ, ಅತಿವೃಷ್ಟಿ, ಅನಾವೃಷ್ಟಿಯಿಂದ ಜಗತ್ತೆಲ್ಲಾ ತಳಮಳಗೊಳ್ಳುವದು ಎಲೌ ಗ್ರಹಗಳಿರಾ ನೀವು ವೃಶ್ಚಿಕ ರಾಶಿಯಲ್ಲಿದ್ದಾಗ ಜಾರ, ಚೋರ, ಮರಣಮಾರಿ, ಅಗ್ನಿ ಭಯ, ಜಲಭಯ, ವಿಷವಾಯು ಕೆಟ್ಟ ಶೀಲ ನೆಗಡಿ ರೋಗಗಳಿಂದ ರಾಜ ಪ್ರಜರನ್ನು ನಾಶಪಡಿಸಿರಿ ಎಲೋ ಗ್ರಹಗಳೇ ವೃಶ್ಚಿಕ ರಾಶಿಯಲ್ಲಿ ನೀವು ಸೇರಿದಾಗ ದುರ್ಜನರನ್ನೂ ಸಂಹರಿಸಿ ಸಜ್ಜನರನ್ನು ಕಾಪಾಡಿರಿ. ಇದೇ ಯೋಗದಲ್ಲಿ ಗ್ರಹಣಾದಿಗಳುಂಟಾಗಿ ಪೀಡೆ ಪಿಶಾಚಿ ಮಹಾರೋಗಗಳಿಂದ ಜನರು ಬಳಲುತ್ತಿರುವಾಗ ಮಹಾಜಲ ಪ್ರಳಯದಿಂದ ಜಗತ್ತಿಗೆ ಜಗತ್ತೇ ತಲ್ಲಣಗೊಳ್ಳುವುದಾಗಿ ಮಾಡಿರಿ.

ಇಂದ್ರನು ನಕ್ಷತ್ರಾದಿ ದೇವತೆಗಳನ್ನು ನೋಡಿ ನೀವು ಉಲ್ಕಾಪಾತಗಳನ್ನು ಧೂಮಕೇತುಗಳನ್ನೂ ಮತ್ತು ಕೆಂಡಗಳ ಮಳೆಯನ್ನು ಸುರಿಸಿ ದುರುಳರು ಹಾ ಹಾ ಎಂದು ತಲ್ಲಣಗೊಳ್ಳುವಂತೆ ಮಾಡಿ ಮಹಾತ್ಮರಾದ ಸಾಧುಗಳೂ, ಸಾಧ್ವಿಗಳೂ ಇವರುಗಳ ಕಣ್ಣೀರು ಭೂಮಿಯಲ್ಲಿ ಬಿದ್ದರೆ ಮಹಾ ಕ್ಷಾಮವೂ ದುಃಖವೂ ದೇಶಕ್ಕೆ ಉಂಟಾಗುವದರಿಂದ ಭೂಲೋಕದ ಸಾಧು ಸಂತರೂ ಸತ್ಪುರುಷರ ಕಣ್ಣೀರು ಭೂಮಿಗೆ ಬೀಳದಂತೆ ದುರ್ಜನರನ್ನೂ ನಿಂತನಿಂತಲ್ಲೇ ಸಾಯುವ ಹಾಗೆ ಮಾಡಿರಿ. ಇದೇ ನಿಮ್ಮ ಕರ್ತವ್ಯವು,

ಎಲೈ ಯಮನೆ ನಿನ್ನ ಸೈನ್ಯವನ್ನು ಕರೆಯಿಸು. ಅವರು ನೀನು ರಾಜರೋಗ, ಮಹಾರೋಗಾದಿ ೨೭ ಕೋಟಿ ಸೈನಿಕರು ಕೂಡಿಕೊಂಡು ತಮ್ಮ ಪ್ರತಾಪಗಳನ್ನು ಹೊಗಳುತ್ತಾ ಭೂಮಂಡಲವನ್ನು ಕುರಿತು ಹೋಗಿ ನಾನಾ ರೀತಿಯಿಂದ ದುಷ್ಟರನ್ನು ನಾಶಮಾಡಿರಿ ಎಂದು ಹೇಳಿದ ನಂತರ ವೈದ್ಯಾಧಿಪತಿಯಾದ ಶ್ರೀ ಧನ್ವಂತರಿಯನ್ನು ಕರೆದು ಎಲೌ ಧನ್ವಂ

ತರಿ ನಿನ್ನ ವೈದ್ಯದ ಸಾರಶಕ್ತಿಯನ್ನೆಲ್ಲಾ ಎಳೆದು ವೈದ್ಯರು ನಿಸ್ಸಾರವಾಗು ವಂತೆ ಮಾಡಿ ಭೂಪಾಸಿತ್ಮ ರೋಗವು ಗುಣವಾಗದಂತೆ ಮಾಡಿ ಬಿಡು. ಮತ್ತೆ ಬ್ರಹ್ಮ ದೇವರು ಮಂತ್ರಮೂರ್ತಿಯಾದ ಅಥರ್ವಣದೇವನನ್ನೂ ಕರೆದು ಎಲೋ ಮಂತ್ರಮೂರ್ತಿ ಅಥರ್ವಣ ನಿನ್ನ ಮಂತ್ರಶಕ್ತಿ ಪ್ರಭಾವವು ಕಲಿಯುಗದ ದುಷ್ಟ ದುರಾತ್ಮ ಜನರಿಗೆ ನಿರುಪಯೋಗವಾಗುವಂತೆ ಮಂತ್ರಶಕ್ತಿ ಸಾರವನ್ನೆಲ್ಲಾ ಎಳೆದುಕೊಂಡು ಬಿಡು. ಮಂತ್ರವಿಲ್ಲದೆ ಮಾಯ ಪಿಶಾಚಿ ಪೀಡೆಗಳು ಜಗತ್ತಿನ ದುರ್ಜನರನ್ನೂ ಬಾಧಿಸಿಕೊಂಡು ಬಿಡಲಿ ಈಶ್ವರನು ಈ ಕಾರ್ಯಭಾಗದಲ್ಲಿ ಕ್ರಮಕೈಕೊಳ್ಳಬೆಕೆಂದು ಕೇಳಿಕೊಳ್ಳಲಿ. ಆಗ ಪರಮಾತ್ಮನು ತನ್ನ ಕುಮಾರ ವೀರಭದ್ರನ ಮೂಲಕ ತನ್ನ ಅನಂತಶಕ್ತಿಗಳನ್ನು ಕರೆಕಳುಹಿಸಿ ಹೀಗೆ ಹೇಳಿದನು.

ಎಲೋ ಶಕ್ತಿದೇವರೇ ನೀವೆಲ್ಲರೂ ಭೂಭಾಗದಲ್ಲಿ ರಾಹು ಪೀಡೆ ಮಾಟ ಮಘುವೆಯಗಳಾಗಿ ಮಾಯಾ ಶಕ್ತಿಯಿಂದ ದುರ್ಜನರನ್ನು ನಾಶ ಮಾಡಿರಿ ಎಂದು ಹೇಳಲು ಅವರು ಪೂರ್ವ ದಿಕ್ಕಿನಿಂದ ಮಹೇಶ್ವರೀ ಶಕ್ತಿಯೂ ಪಶ್ಚಿಮ ದಿಕ್ಕಿನಿಂದ ಸ್ಫೋಟಿಕಾಶಕ್ತಿಯರೂ ದಕ್ಷಿಣ ದಿಕ್ಕಿನಿಂದ ಜ್ವರ ವಾಂತಿ ದಹಾದಿ ಶಕ್ತಿಯರೂ, ಉತ್ತರ ದಿಕ್ಕಿನಿಂದ ಜ್ವರ ಸನ್ನಿಪಾತಾದಿ ಶಕ್ತಿಯರು ಹೀಗೆ ಚತುರ್ದಿಕ್ಕುಗಳ ಮೂಲಕ ಶಕ್ತಿಯರು ಹೊರಟು ಭೂಮಂಡಲವನ್ನು ಕುರಿತು ಬರೆದರು.

ಮೇಲಿನ ಕ್ರೂರ ದೇವತೆಗಳೆಲ್ಲರೂ ಭೂಲೋಕದಲ್ಲಿ ವೀರ ಭೀಕರ ಕ್ಷಾಮಗಾಲದಲ್ಲಿ ವಾಂತಿ ಭ್ರಾಂತಿರೋಗಗಳಿಂದಲೂ ದುರ್ಭಿಕ್ಷದಿಂದಲೂ ಬಳಲುತ್ತಿರುವಾಗ ಶ್ರೀ ಮನ್ನಾರಾಯಣನ ಅವತಾರದಿಂದ ಭೂಮಂಡಲ ಶಾಂತಿಯಾಗುವದು. ಎಲೈ ಶೌನಕಾದಿಗಳೇ ಕೇಳಿರಿ. ಯಮನು ಗೋವಧೆಯನ್ನು ಮಾಡುವವರನ್ನೂ ಶಿಕ್ಷಿಸುವನು. ಜನರು ಘೋರ ಪಾಪಿಗಳು ಬಾಧೆಯನ್ನನುಭವಿಸುತ್ತಾ ತಾವು ಸನ್ಮಾರ್ಗವನ್ನು ಅನುಸರಿಸದೆ ಹೋದುದರಿಂದ ನರಕಿಗಳಾದೆವೆಂದು ದುಃಖಿಸುವರು. ಇನ್ನು ಧರ್ಮವೇ ಸತ್ಯ ಅದನ್ನು ಆಚರಿಸಬೇಕೆಂದು ಯೋಚಿಸುವರು, ಈ ಪ್ರಕಾರ ದುರ್ಮುಖಿ ಮೊದಲು ಕ್ಷಾಮಗಳು ಹೆಚ್ಚಾಗಿ ಲೋಕದೊಳು ಮಳೆ ಬೆಳೆಗಳು ಕೈಗೊ

ಗಡದೆ ಅಗ್ನಿ ಭಯಾದಿಗಳು ಹೆಚ್ಚಿ ಮಹಾರೋಗಗಳುಂಟಾಗಿ ಧಾನ್ಯಗಳು ತುಟ್ಟಿಯಾಗಿ ಕಳ್ಳತನ ಮೊದಲಾದವು ಹೆಚ್ಚಾಗುವವು. ಅನೇಕ ಜನಗಳು ರೋಗದಿಂದ ನಾಶವಾಗುವರು. ಎಲೈ ನಾರದನೆ ಹೀಗೆ ಭೂದೇವತೆಗೆ ಪರ್ವತಾದಿಗಳಿಗಿಂತಲೂ ಪಾಪಿಗಳ ಭಾರವೇ ಹೆಚ್ಚಿರುವದರಿಂದ ಧರ್ಮನಿರತರಾಗಿ ದಯಾ ಶಾಂತಿಗಳಿಂದೊಡಗೂಡಿ ಪಾಪಭೀತನಾಗಿ ಇರುವ ನರನಿಗೆ ಯಾವ ಭಯವೂ ಇಲ್ಲ. ಇನ್ನು ದೇವತಾ ಪೂಜೆ ಮೊದಲಾದವುಗಳನ್ನು ಮಾಡುತ್ತಲೂ ಮಾಡಿಸುತ್ತಲೂ ಧರ್ಮನಿರತನಾಗಿರುವವನಿಗೆ ನರಕ ಬಾಧೆಯು ಸಂಭವಿಸುವದಿಲ್ಲವೆಂದು ಬ್ರಹ್ಮನು ನಾರದ ಮುನೀಂದ್ರನಿಗೆ ಹೇಳಿರುವನೆಂದು ಸೂತನು ಶೌನಕಾದಿ ಮುನಿಗಳಿಗೆ ಹೇಳಿದ ಕಾಲಜ್ಞಾನವೇ ಇದು.

# ರುದ್ರಮುನಿ ಸ್ವಾಮಿಗಳ ಕಾಲಜ್ಞಾನವು

## ಕಂದ ಪದ್ಯ

ಶ್ರೀ ಮಾಧವನಂ ವಿಧಿಯಂ ।
ಕಾಮಾರಿಯು ಶ್ರೀ ಯುಮುಂಬಿಕಾವಾಗ್ದೇವಿ ॥
ದೈ ಮಾತುರ ಗ್ರಹಣಗಣ ಮುಂ ।
ಪ್ರೇಮದಿ ಮಣಿಗೆರಗಿ ಭಜಿಪೆನೀಯಲಿ ಶುಭಂ ।

ಆದಿ ಅನಾದಿ ಅಳಂದರ ವಿಳಂದರ ಕಳಂದರ ಅನಂತ ಅರ್ಬುದ ಕಮುಂದ ಕಂಡಜಿ ತಾರಜ ಭಿನ್ನಜ ಭಿನ್ನಾಯುಕ್ತ, ಅಯುಕ್ತಮಣಿರಣ ಮಾನ್ಯರಣ ವಿಶ್ವಾವಸು ಅಲಂಕೃತ ಕೃತ ತ್ರೇತಾ ದ್ವಾಪರಾ ಕಲಿಯುಗಗಳಲ್ಲಿ ಬಸವಣ್ಣನೇ ಭಕ್ತ ಪ್ರಭುದೇವರೇ ಜಂಗಮ ಇಂತೆಂಬ ಭೇದವಿಲ್ಲ ನೋಡಿರಯಾ ಭಕ್ತಿಯೇ ಪ್ರಬಲವನ್ನುಂಟು ಮಾಡಬೇಕೆಂಬುದು ಮುಂದಿಗೆ ಮಾದರಸರು ಮಾದಲಾಂಬಿಕೆಯ ಗರ್ಭದಲ್ಲಿ ಉದ್ಭವಿಸಿ ತಂಡತಂಡ ನಾಮಾಂಕಿತವನ್ನು ಕೈಕೊಂಡು ಬಸವನಪ್ರಿಯ ಕೂಡಲ ಚನ್ನಸಂಗಯ್ಯ ಇವರ ದಿವ್ಯ ಪಾದಕ್ಕೆರಗಿ ಪೇಳಿದ ಕಲಿಯುಗ ಪ್ರಮಾಣವೆಂದರೆ ೪ ಲಕ್ಷ

೩೨ ಸಾವಿರ ವರ್ಷಗಳು. ಶ್ರೀ ಬಸವೇಶ್ವರ ದೇವರು ಕಲ್ಯಾಣಕ್ಕೆ ಬಂದದ್ದು ಅಲ್ಲಿಗೆ ಕಲಿ ವರ್ಷಗಳು ಶ್ರೀ ಕೈಲಾಸಕ್ಕೆ ದಯಮಾಡಿಸಿದ್ದು ೪೮೯೨ನೇ ರಾಕ್ಷಸ ನಾಮ ಸಂವತ್ಸರ ಫಾಲ್ಗುಣ ಶುಕ್ಲ ೧೨ ಸೋಮವಾರ ೨೮ ಘಳಿಗೆಯ ಮೇಲೆ ಹೊರಟು ಹೋದರು. ಅಡಪದ ಅಣ್ಣಪ್ಪನವರು, ಕಪ್ಪಡಿ ಸಂಗಮೇಶ್ವರನಲ್ಲಿ ಐಕ್ಯವಾದರು ನಳನಾಮ ಸಂವತ್ಸರದ ವೈಶಾಖ ಬಹುಳ ೨ ಮಂಗಳವಾರ ರೋಹಿಣಿ ನಕ್ಷತ್ರದಲ್ಲಿ ೭೭೦ ಮಂದಿ ಅಮರಗಣಂಗಳು ೬೦ ಮಂದಿ ಪುರಾತನರೂ ೧೨೦೦೦ ಜಂಗಮರೂ ಸಹಿತ ಬಿಜ್ಜಳನ ವಧೆ ಮಾಡಿಸಿ ಉಳುವಿಗೆ ದಯಮಾಡಿಸಿದರು ಹಿಂದಕ್ಕೆ ೧೦ ಮುಂದಕ್ಕೆ ೧೧ ಸಂದ ಆನಂದ ನಾಮ ಸಂವತ್ಸರದಲ್ಲಿ ವೀರ ವಸಂತರಾಯನು ಹುಟ್ಟುವನು. ಸತ್ಯ ನಿಮ್ಮಾಣೆ ನಿಮ್ಮ ಪುರಾತನರ ಪಾದದಾಣೆ.

## ಪದ ॥ ರಾಗ ॥

ಮುಂದಿನ್ನು ದಿನ ಮಾನ ಬಹು ಕೆಟ್ಟು ಬರುತಾವೇ ಕೇಳಿರಣ್ಣಾ
ಚಂದಾನಗೋಪುರ ಅಂದಾವನಳಿದಾರು ನೋಡಿರಣ್ಣಾ
ಕಂಧ್ಹಾನ ದುರ್ಗಾವು ಕೈರೆಸೆಯಾದೀತು ಕೇಳಿರಣ್ಣಾ
ಚಂದ್ರನ ಮೇಲಿನ್ನು ಚುಕ್ಕೆ ತಾ ಮೂಡಿತು ನೋಡಿರಣ್ಣಾ
ಬಂದಾನು ಬೃಹಸ್ಪತಿ ಚಂದ್ರನ ರಥದಲ್ಲಿ ಕೇಳಿರಣ್ಣಾ
ಎಂದು ಎಂದೆನ ಬೇಡಿ ಬಂದಾವು ದಿನಮಾನ ನೋಡಿರಣ್ಣಾ
ಹಂದಿ ಮಾನವರಿಗೆ ತಿಳಿಯದು ಈ ಮಾತು ಕೇಳಿರಣ್ಣಾ
ಸಂದಾವು ದಿನಗಳು ಶರಣಾರು, ಬರುತಾರೆ ನೋಡಿರಣ್ಣಾ
ಮಳೆಗಾಲು ಅಡಗ್ಯಾವು ಬೆಳೆಗಾಳು ನಿಂತಾವು ಕೇಳಿರಣ್ಣಾ
ಹಮ್ಮಿನಮನು ಜಾರುಮುಂದಿಯನ್ನು ಕೆಟ್ಟಾರು ನೋಡಿರಣ್ಣಾ
ಗಡಿಬಿಡಿ ಮಾಡ್ಯಾರು ಒಬ್ಬಾರ ಗಂಟನ್ನು ನೋಡಿರಣ್ಣಾ

## .... ವಚನ ....

ಕೀಲಕ ನಾಮ ಸಂವತ್ಸರದಲ್ಲಿ ಕಿರೀಟರಾಯ ರಾಜನು ಬಯಲಿಗೆ ಬಿದ್ದನು. ಚಂದ್ರನ ಮೇಲೆ ಚುಕ್ಕೆ ಎಂದು ಕೂಡುತ್ತೆಂದರೆ ವಿರೋಧಿ

ನಾಮ ಸಂವತ್ಸರದ ಫಾಲ್ಗುಣ ಶುದ್ಧ ೧೩ ಭಾನುವಾರ ಚುಕ್ಕಿ ಕೂಡಿದ್ದೇ ಕುರುಹು.

## ॥ ಪದ ॥

ಮುಂದಿನ ಸೂಚನೆ ಚನ್ನಾಗಿ ಹೇಳುವೆ ಕೇಳಿರಣ್ಣಾ
ಭೂಮಿ ಮೇಲಣ ವೃಕ್ಷಯಲ್ಲಾವು ಮುರಿದಾವು ನೋಡಿರಣ್ಣಾ
ಸೀಮೆಗಳೆಲ್ಲಾವು ಹಾಳಾಗಿ ಹೋದಾವು ಕೇಳಿರಣ್ಣಾ
ರಾಮರ ಕಾಳಗವಾದೀತು ಮರ್ತ್ಯಾದಿ ನೋಡಿರಣ್ಣಾ
ವ್ಯೋಮಕೇಶನ ಶಿವಶರಣಾರು ಬರುವಾಗ ಕೇಳಿರಣ್ಣಾ
ಹೊನ್ನೀಗೆವದ್ಮಾನ ಧಾನ್ಯಾವು ಮಾರೀತು ನೋಡಿರಣ್ಣಾ
ಅನ್ನವ ಕಾಣದೆ ಮನೆಮನೆ ತಿರುಗ್ಯಾರು ಕೇಳಿರಣ್ಣಾ
ಆಕಾಶವದರೀತು ಭೂಕಾಂತೆ ನಡುಗ್ಯಾಳು ನೋಡಿರಣ್ಣಾ
ಕುಹಕರು ಬಂದರು ಕಡೆಯಾಟವಾದೀತು ಕೇಳಿರಣ್ಣಾ
ಲೋಕಕ್ಕೆ ಮೀರಿದ ಚೋರರು ಬರುತಾರೆ ನೋಡಿರಣ್ಣಾ
ಮಾರಾಟ ನಡೆಯದು ಹೋರಾಟವಾದೀತು ಕೇಳಿರಣ್ಣಾ
ಎಣಿಕೆಯಕೊಂಡಾರು ಎಳೆದಾಟವಾದೀತು ನೋಡಿರಣ್ಣಾ
ಧಣಿಗಾಳು ಬಂದಾರು ದಂತಾವ ಮುರಿದಾರು ಕೇಳಿರಣ್ಣಾ
ಎಚ್ಚಾರ ಸ್ತ್ರೀಯಾರು ಮೆಚ್ಚುಗಳು ಮಾಡ್ಯಾರು ನೋಡಿರಣ್ಣಾ
ಲೋಕವು ಹೆಚ್ಚೀತು ಕೆಚ್ಚಾಗಿ ಉದುರೀತು ಕೇಳಿರಣ್ಣಾ
ಅಚ್ಚಿವಿಚ್ಚಿ ಬೈಗಳು ಬೈದಾಡಿಕೊಂಬೋರು ನೋಡಿರಣ್ಣಾ

## — ವಚನ —

ಹೊನ್ನಿಗೆ ಒಮ್ಮಾನ ಧಾನ್ಯ ಯಾವಾಗ ಮಾರುವುದೆಂದರೆ ಪರಿಧಾವಿ ನಾಮಸಂವತ್ಸರದ ಚೈತ್ರ ಶುದ್ಧ ಮೊದಲ್ಗೊಂಡು ೬ ತಿಂಗಳು ಕಲ್ಯಾಣ ಪುರದಲ್ಲಿ ಕಚ್ಚಾ ಸೇರುಮಾನದತ ೧೮ ದಿನಸಿನ ಧಾನ್ಯವನ್ನು ಮಾರಿದ್ದೇ ಕುರುಹು. ೪ ಕೋಟಿ ೪೮ ಲಕ್ಷ ೨೮ ಸಾವಿರ ಪ್ರಜೆಗಳು ಅನ್ನವನ್ನು ಕಾಣದೆ ಲಯವಾಗಬೇಕು. ಭೂಮಿಯು ಯಾವಾಗ ಗುಡುಗಬೇಕೆಂದರೆ

ಪ್ರಥಾವಿ ನಾಮ ಸಂವತ್ಸರದ ಜೇಷ್ಠ ಶುದ್ಧ ಮಂಗಳವಾರ ೧೧ ಹುಬ್ಬಾ ನಕ್ಷತ್ರದಲ್ಲಿ ಗುಡುಗಿದ್ದೇ ಕುರುಹು-

## —ಪದ—

ಎಮ್ಮಾಣೆ ಕಾವೇರಿ ಶ್ರೀರಂಗಪಟ್ಟಣದಲ್ಲಿ ಕೇಳಿರಣ್ಣಾ
ಚನ್ನವೀರ ವಸಂತಾನು ಹುಟ್ಯಾನು ನೋಡಿರಣ್ಣಾ

## ... ವಚನ....

ಆನಂದ ನಾಮ ಸಂವತ್ಸರದ ಕಾರ್ತಿಕ ಶುದ್ಧ ೧ ಶುಕ್ರವಾರ ಸ್ವಾತೀ ನಕ್ಷತ್ರದಲ್ಲಿ ೧೮ ಘಳಿಗೆಯ ಮೇಲೆ ಹುಟ್ಟುವನು. ಸತ್ಯ. ದೇವಕ್ಕಿ ದೇವಿಯ ಗರ್ಭದಲ್ಲಿ ಕ್ಷತ್ರಿಯ ವಂಶದಲ್ಲಿ ವೀರ ವಸಂತರಾಯನು ಇರುವ ಕುರುಹು ಹೇಗೆಂದರೆ ಡಮುರು ಗಹಸ್ತವು ಊರ್ದ್ವರೋಮವೂ ಹಸರುನರ ಗಳೂ ಹಣೆಯ ಮೇಲೆ ಎದ್ದಿರಬೇಕು. ಎಡಕುಂಟದ ಆಜ್ಞೆಯಲ್ಲಿ ೧೨ ವರ್ಷ ಇರಬೇಕು. ಅತನು ಹುಟ್ಟಿದ ಕುರುಹಿಗೆ ಬಿದಿರುಕೋಟೆಯಲ್ಲಿ ೯ ಲಕ್ಷ ದಂಡುಮುಡಿಯಬೇಕು. ಅದು ಯಾವಗೆಂದರೆ ಆನಂದ ನಾಮ ಸಂವತ್ಸರದ ಫಾಲ್ಗುಣ ಶುದ್ಧ ೧೫ ದಿವಸ ರಕ್ತದ ಕಾಲುವೆ ಹರಿಯಬೇಕು. ರಾಕ್ಷಸ ನಾಮ ಸಂವತ್ಸರದಲ್ಲಿ ಆರಸುಗಳು ದೇಶಾದಿಪತಿಗಳು ಆಳುವರು. ನಳನಾಮ ಸಂವತ್ಸರದಲ್ಲಿ ೩ ಗ್ರಹಣದ ಫಲವು ಜರುಗಬೇಕು. ಕಾಳೇಶ್ವರದಲ್ಲಿ ೧೦ ಘಳಿಗೆ ರಾಜ್ಯ ಹೋದದ್ದೇ ಸಾಕ್ಷಿ ಪಿಂಗಳ ನಾಮ ಸಂವತ್ಸರದ ಅಶ್ವೀಜ ಶುದ್ಧ ೧೫ ದಿನದಲ್ಲಿ ಆಕಾಶ ಒದರಿದ್ದೇ ಸಾಕ್ಷಿ.

## .... ಪದ ....

ಅಮ್ಮಿನದುರ್ಗಕ್ಕೆ ಅಮ್ಮಾಜಿ ಬರುತಾಳೆ ಕೇಳಿರಣ್ಣಾ
ಗರ್ವದ ಪಾಪಿಗಳ ನಿರ್ಮೂಲ ಮಾಡ್ಯಾಳು ನೋಡಿರಣ್ಣಾ
ಅಮ್ಮ ಅಪ್ಪಗಳನ್ನು ಗುಮ್ಮಾಡಿ ಬಿಟ್ಟಾಳು ಕೇಳಿರಣ್ಣಾ
ತಮ್ಮ ಮಕ್ಕಳನ್ನು ಮಾರಿಕೊಂಡು ತಿಂದಾರು ನೋಡಿರಣ್ಣಾ
ಅಡ್ಡಗಲ ಐವತ್ತು ಗಾವುದ ಬೆಳೆದಾಳು ಕೇಳಿರಣ್ಣಾ

ನೀಡುದಾಗೆ ಅರುವತ್ತು ಗಾವುದ ಬೆಳೆದಾಳು ನೋಡಿರಣ್ಣಾ
ತಿರುಗೂತ ಹೆಣಗಳ ಅಲ್ಲಲ್ಲೇ ಕಡಿದಾಳು ಕೇಳಿರಣ್ಣಾ
ಮೂರುಗಾವುದ ಉದ್ದ ನಾಲಿಗೆ ಚಾಚ್ಯಾಳು ನೋಡಿರಣ್ಣಾ
ಮೂಗಿನ ಉಸುರೀಗೆ ಮೂವತ್ತು ಗಾವುದ ಕೇಳಿರಣ್ಣಾ
ದಕ್ಷಿಣದಿಂದ ಉತ್ತರಕ್ಕೆ ನಡೆದಾಳು ನೋಡಿರಣ್ಣಾ

.... ವಚನ ....

ಕಾಳಾಯುಕ್ತಿ ನಾಮ ಸಂವತ್ಸರದ ಆಷಾಢ ಶುದ್ಧ ೫ ಭಾನುವಾರ ಪುಷ್ಯ ಮಾಘ ನಕ್ಷತ್ರದಲ್ಲಿ ಈಶಾನ್ಯ ದಿಕ್ಕಿನಿಂದ ಪಶ್ಚಿಮ ದಿಕ್ಕಿಗೆ ಹಾರ್‍ಯಾಳು ನಾಲ್ಕು ದಿಕ್ಕಿನಲ್ಲಿ ನಾಲ್ಕು ಮೂರು ತಿಂಗಳು ಇದ್ದಾಳು. ೮೮ ಲಕ್ಷ ೨೫ ಸಾವಿರ ಪ್ರಜೆಗಳು ಲಯವಾಗಬೇಕು. ಹಂಪೆ ಸ್ಥಳದಲ್ಲಿ ೧೮ ಲಕ್ಷ ಮಾರ್ಬಲವು ಕೂಡೀತು. ಅಲ್ಲಿಯ ರಾಯರಿಗೆ ಜಗಳಗಳಾದಾವು. ಅಲ್ಲಿ ಯಾರ್‍ಯಾರು ಕೂಡಬೇಕೆಂದರೆ, ಅಶ್ವಪತಿ, ಗಜಪತಿ, ನರಪತಿ ಪರಂಗೆ ತಾಂಬ್ರದ ಬೋರೆಯವರು, ಕಿರೀಟ ರಾಮರಾಯನು, ದಿಲ್ಲಿ ಸುಲ್ತಾನನೂ, ಷಾವನ್ನ ದಳನ್ನ ಬಾವನ್ನ ಗಡ್ಡದವರು ೭೨ ಮಂದಿ ಪಾಳೆಯಗಾರರು ಸಹ ಸೇರಬೇಕು. ಕಾಶೀ ಕಡೆಯಿಂದ ಹರೇದ ಹೆಣ್ಣುಮಗಳು, ಮೊದಲಿಂಗನ ತೆಗೆದುಕೊಂಡು ಬರುವಳು. ಬಿದಿರುಕೋಟೆ ಕಲ್ಲುಗಳು. ಒಲೆಗುಂಡಿಗೆ ಸಾಲದೆ ಹೋಗುವವು. ವಿರುಪಾಕ್ಷ ದೇವರ ಬಳಿಯಲ್ಲಿ ೧೮ ಲಕ್ಷ ದಂಡು ಜಮಾ ಆಗುವುದೇ ಕುರುಹು. ಅಲ್ಲಿ ರಕ್ತದ ಕಾಲುವೆ ಹರಿಯಬೇಕು. ೧೨ ಖಂಡುಗ ಬಳೆಗಳು ಒಡೆದು ಹೋದಾವು. ಇದು ಯಾವಾಗೆಂದರೆ ಸಿದ್ಧಾರ್ಥಿ ನಾಮ ಸಂವತ್ಸರದ ಫಾಲ್ಗುಣ ಶುದ್ಧ ೩ ದಿವಸದಲ್ಲಿ ವಾಲೀ ಭಂಡಾರದ ದ್ರವ್ಯವನ್ನು ತೆಗೆಯಬೇಕೆಂದು ಬಂದಾರು. ಚಾಳೇಂದ್ರ ಪರ್ವತ ದೊಳಗಿನಿಂದ ಜ್ಞಾನ ಗುಣಮಣಿ ಎಂಬ ಋಷೀಶ್ವರರು ಹೊರಟು ಬಂದು ನರಮಾನ್ಯರಿಗೆ ಸಾಧ್ಯವಾಗಲಾರದೆಂದು ಹೇಳಿದಾಗ್ಯೂ ಅವರ ಮಾತು ಕೇಳದೆ ವಾಲೀ ಭಂಡಾರಕ್ಕೆ ಆಹುತಿ ಕೊಟ್ಟರು. ಅವರು ಅದೃಶ್ಯರಾಗಿ ಹೋಗುವರು.

.... ಪದ ....

ಹನ್ನೆರಡು ಸಾವಿರ ಕನ್ಯೆ ಹೆಣ್ಣಾಹುತಿ ಕೇಳಿರಣ್ಣಾ
ಮೂರು ಸಾವಿರ ಬಸಿರು ಹೆಣ್ಣುಗಳಾಹುತೀ ನೋಡಿರಣ್ಣಾ
ಮೂರು ಲಕ್ಷ ಸಂಖ್ಯೆ ಕೋಣಗಳಾಹುತೀ ಕೇಳಿರಣ್ಣಾ
ಆರು ಲಕ್ಷ ಸಂಖ್ಯೆ ಕರುಗಳಾಹುತೀ ನೋಡಿರಣ್ಣಾ

ವಚನ ...

೨೫ ಖಂಡುಗ ಅನ್ನ ಆಹುತಿ ೩ ಖಂಡುಗ ಎಣ್ಣೆ ದೀಪವು ೨೮ ಮಣ ಅರಿಸಿನವು ೨೫ ಪೊ ಣ ಮೆ ಣ ಸು ಎಷ್ಟು ಕೊಟ್ಟಾಗೂ ಅದು ಸಾಧ್ಯ ವಾಗದು.

.... ಪದ ....

ಕುಂಕುವರ್ಣ ಉಳ್ಳಸತಿಕರ ಹೊರಟೀತು ಕೇಳಿರಣ್ಣಾ
ಮನಸಿಗೆ ಬಂದಂತೆ ಮಾರ್ಬಲವ ಕೊಂದೀತು ನೋಡಿರಣ್ಣಾ
ಐದು ಗಜದ ಹಂದಿ ಕನ್ಯೆ ಹೆಣ್ಣಾದೀತು ಕೇಳಿರಣ್ಣಾ
ಕಾದು ಮಡಿದಾರು ತಮತಮಗೆಂಬೂತು ನೋಡಿರಣ್ಣಾ
ಎನಗೆ ತನಗೆ ಎಂದು ಗುದ್ಯಾಟವಾದೀತು ಕೇಳಿರಣ್ಣಾ
ಎದ್ದ್ಹಾಳು ಪರ್ವತಗಿರಿಗೆ ಆ ಲಕ್ಷ್ಮಿಯು ನೋಡಿರಣ್ಣಾ

.... ವಚನ ....

ಇವರು ಎಷ್ಟು ಹಿಂಬಲವಾಗಿ ಹೋದರೂ ಅಲ್ಲಿ ಅದೃಶ್ಯವಾಗಿರುವದು ಅಲ್ಲಿಂದ ಶ್ರೀ ಮಲ್ಲಿಕಾರ್ಜುನನ ಗುಡಿಗೆ ಹೋಗುವರು, ಮುಸಲ್ಮಾನರು ಬಿಡುವದಿಲ್ಲವೆಂದು ೩ ದಿವಸ ಮುತ್ತಿಗೆ ಹಾಕುವರು. ಶ್ರೀ ಮಲ್ಲಿಕಾರ್ಜುನ ದೇವರು ಬಂದು ಅವರ ಸ್ವಪ್ನದಲ್ಲಿ ಹೇಳಿದಾಗ್ಯೂ ಅವರು ಬಿಡುವುದಿಲ್ಲ ವೆಂದು ಹೇಳಲು ಆ ಲಕ್ಷ್ಮಿದೇವಿಯೇ ಪರ್ವತಗಿರಿಯನ್ನು ಬಿಟ್ಟು ಗೋಲ್ಗಿ ರಿಗೆ ಹೋಗಿ ಸೇರುವಳು. ಅದರ ದೆಸೆಯಿಂದ ಶ್ರೀ ಮಲ್ಲಿಕಾರ್ಜುನ ದೇವರನ್ನು ಕಿತ್ತು ಹಾಕಿದ ಒಳಿಕ—

.... ಪದ ....

ಉರುಟಾನೆ ಮಾಡ್ಯಾರು ಸೂಳೆರೊಡಗೂಡ್ಯಾರು ಕೇಳಿರಣ್ಣಾ
ತರಗಳು ಬೆಳೆದಾವು ಅರಾಣ್ಯವಾದೀತು ನೋಡಿರಣ್ಣಾ

ಅಲ್ಲಿ ಮುಸಲ್ಮಾನರು ಮಸೀದಿ ಕಟ್ಟುವರು, ಕಾದ್ರಿನಾಮ ಸಂವತ್ಸರದ ಚೈತ್ರ ಶುದ್ಧ ೨ ಭಾನುವಾರ ರೋಹಿಣಿ ನಕ್ಷತ್ರದಲ್ಲಿ ಅದದ್ದೇ ಕುರುಹು. ಬಂಗಾರದ ಅಮೂಲ್ಯವಾದ ಬಸವೇಶ್ವರನ ಕರ್ಣದಲ್ಲಿ ಕೊಟ್ಟಲ ಬಳಿ ಒಂದೇ ದಿವಸದಲ್ಲಿ ಗುಡಿಯ ಸುತ್ತ ಹಬ್ಬಿಕೊಂಡು ಅಲ್ಲಿ ಒಂದು ಅರ್ಭಟೆ ವಾದ ಕೂಗು ಹುಟ್ಟಿ ಅದರಿಂದ ಅರ್ದದಂಡುಲಯವಾದಿತು ಅಲ್ಲಿಂದ ವೆಂಕಟರಮಣನಲ್ಲಿಗೆ ಹೋದೀತು.

.... ಪದ ....

ಹೆಬ್ಬೂಲಿ ಬೆಟ್ಟಾದ ಸುತ್ತಾಲು ತಿರುಗ್ಯಾವು ಕೇಳಿರಣ್ಣಾ
ಹೆಬ್ಬೀತಕಾಡಿನ್ನು ತುಂಗಭದ್ರೆಯ ತನಕ ನೋಡಿರಣ್ಣಾ
ಒಬ್ಬಾರು ಶ್ರೀ ಮಲ್ಲಿಕಾರ್ಜುನಗೆ ಹೋಗಾರು ಕೇಳಿರಣ್ಣಾ
ತಬ್ಬಿಕೊಂಡು ಹೋಗುವುದಕ್ಕೂ ದಾರಿಲ್ಲ ನೋಡಿರಣ್ಣಾ

ವಚನ

ಸರ್ಪಭೂಷಣನ ಬೆಟ್ಟದೊಳಗಿನಿಂದ ೭ ಗಜದುದ್ದ ಕರೀ ಹುಲಿ ಬಂದು ಸೇರಿತು. ಅಲ್ಲಿಂದ ವೆಂಕಟರಮಣ ತಿಮ್ಮಪ್ಪನ ನಾಭಿಕಮಲದಲ್ಲಿದ್ದ ರತ್ನವನ್ನು ತೆಗೆಯಬೇಕೆಂದು ಹೋದಾರು, ಮುಸಲ್ಮಾನರು ಆ ಗಿರಿಯನ್ನು ಏರಲಿಕ್ಕಾಗಿ ಬಂದಾರು, ಕಾದ್ರಿ ನಾಮ ಸಂವತ್ಸರದ ಶುದ್ಧ ೧ ಗುರುವಾರ ಒಂದು ಘಳಿಗೆಗೆ ಕೋಟಿ ದ್ರವ್ಯವು ಇದ್ದಿಲಾದಿತು. ಶಿಲಾಮೂರ್ತಿ ಅದೃಶ್ಯ ವಾದೀತು. ಬ್ರಹ್ಮ ದೇವರಿಟ್ಟ ದೀವಿಗೆ ಅದೃಶ್ಯವಾಗುವನು. ಅಲ್ಲಿಂದ ಅಳಿಯಪುರಕ್ಕೆ ಬಂದಾರು ಮಾತಂಗ ಪರ್ವತದ ಬಳಿಯಲ್ಲಿ ಮಸೀದಿ ಕಟ್ಯಾರು, ಆ ಪವರ್ತದ ಮೇಲೆ ಗುಮ್ಮಗೆ ಅಳಿದಾರು. ಇದು ಯಾವಗೆಂದರೆ ಕಾದ್ರಿ ನಾಮ ಸಂವತ್ಸರದ ಶ್ರಾವಣ ಬಹುಳ ೪ ಮಂಗಳವಾರ

ರೋಹಿಣಿ ನಕ್ಷತ್ರದಲ್ಲಿ ೫ ಘಳಿಗೆಯ ಮೇಲೆ ವಿರುಪಾಕ್ಷ ದೇವರ ಪೂಜೆಯು ನಿಂತು ಹೋದೀತು.

.... ಪದ ....

ಜ್ಯೋತಿಷ್ಯ ಶಕುನಾವು, ಸಟಿಯಾಗಿ ಹೋದಾವು ಕೇಳಿರಣ್ಣಾ
ಚಾತುರ್ಯ ಹೆಚ್ಚೀತು ಕಲಿಯುಗದೊಳಗಿನ್ನು ನೋಡಿರಣ್ಣಾ

.... ವಚನ ....

ಅಂಗಹರಿಣ ಮುಂಗುಸಿ ಮೊಲ ನಾಯಿ ಬೆಕ್ಕು ಇಲಿ ಈ ೬ ಬಲಕ್ಕೆ ಬಂದರೆ ಶುಭವಾಗುವದು. ಗಾಣಿಗರು ಬೋಳುತಲೆ ಹಾದರಗಿತ್ತಿ ಒಂಟಿ ಬ್ರಾಹ್ಮಣ ಕಟ್ಟಿಗೆ ಹೊರೆ ಇವು ಎದುರಾಗಿ ಬಂದರೆ ಅಶುಭವಾದೀತು. ಪಂಚಾಯಿತಿಗಳಲ್ಲಿಯೂ ನ್ಯಾಯ ಕೆಟ್ಟದ್ದಾಗುವದು. ಕೆಟ್ಟದ್ದು ನ್ಯಾಯವಾಗಿ ಒಳ್ಳೆಯದಾಗುವದು. ಜೋಡು ಮುತ್ತೈದೆಯರು ತುಂಬಿದ ಕೊಡ ಎತ್ತಿಕೊಂಡು ಬಂದರೆ ಲಕ್ಷಣವಾದೀತು.

.... ಪದ ....

ಛತ್ರೀಯ ನೆರಳೀಲಿ ಎತ್ತೆಮ್ಮೆ ಮಾರುವರು ಕೇಳಿರಣ್ಣಾ
ಅತ್ತೆಗೆ ಸೊಸೆ ಬಂದು ಕಾಲಲ್ಲಿ ಒದ್ದಾಳು ನೋಡಿರಣ್ಣಾ
ನಿತ್ಯನೇಮ ಜಪತಪಗಳು ಕೆಟ್ಟಾವು ಕೇಳಿರಣ್ಣಾ
ಕಲ್ಲುಕಲ್ಲಿಗೆ ಒಂದು ಕುದುರೆಗಳಾದಾವು ನೋಡಿರಣ್ಣಾ
ಕಲ್ಯಾಣ ಪಟ್ಟಣ ಕಟುಗರ ಕೇರ್ಯಾದೀತು ಕೇಳಿರಣ್ಣಾ
ಒತ್ತಿಗೆ ಓದುವರು ಕತ್ತೆಗಳಾಗುವರು ನೋಡಿರಣ್ಣಾ
ಉಳ್ಳೆಗಡ್ಡೆಗೆ ಒಂದು ಹೆಣ್ಣುಗಳಾದಾವು ಕೇಳಿರಣ್ಣಾ
ಒಳ್ಳೆ ಪುರುಷನ ನೋಡಿ ವಗತಾನ ಬಿಟ್ಟಾರು ನೋಡಿರಣ್ಣಾ
ಹಾರುವರ ಹೆಣ್ಣುಗಳು ಧೀರೇರು ಆದಾರು ಕೇಳಿರಣ್ಣಾ
ತಂದೆ ಮಗನಿಗೊಬ್ಬ ಹೆಂಡತಿಯಾದಾಳು ನೋಡಿರಣ್ಣಾ
ತಂದೆಯ ಕೊಂದು ಮಗ ರಾಜ್ಯಳ್ಯಾನು ಕೇಳಿರಣ್ಣಾ

ಮುಂದಿನು ಮುಸಲ್ಮಾನರೆಲ್ಲ ಮುಣಿಗ್ಯಾರು ನೋಡಿರಣ್ಣಾ
ಒಂದಲ್ಲ ಗುರು ಶಿಷ್ಯ ತಂದೆ ಮಕ್ಕಳ ನ್ಯಾಯು ಕೇಳಿರಣ್ಣಾ
ಸಂದುಹೋದ ಮೂರು ಜಗವು ನುಂಗೀತು ನೋಡಿರಣ್ಣಾ
ಹೊಣೆಯಾದ ಜನರನ್ನು ಕೆಡಿಸ್ಯಾರು ಮುಂದಿನ್ನು ಕೇಳಿರಣ್ಣಾ
ಗೆಣತೀಯ ನಂಬಿನ್ನು ಹೆಂಡತೀಯ ಬಿಟ್ಟಾರು ನೋಡಿರಣ್ಣಾ
ಗುರು ಜನಗಳ ಕಂಡು ಅಣಕೀಸಿ ನಕ್ಕ್ಯಾರು ಕೇಳಿರಣ್ಣಾ
ಪುಂಡ ಜನಗಳಲ್ಲಿ ಸ್ನೇಹಾವ ಬೆಳೆಸ್ಯಾರು ನೋಡಿರಣ್ಣಾ
ತಿಳಿಯಾದೆ ಹೋಗುವರು ನರಕಕ್ಕೆ ಮುಂದಿನ್ನು ಕೇಳಿರಣ್ಣಾ

## ....ವಚನ....

ಕಲ್ಯಾಣಪುರ ಪ್ರಾಂತದಲ್ಲಿರುವ ಬಾಲಕಿ ಎಂಬ ಪಟ್ಟಣದಲ್ಲಿ ಶಿವ ಭಕ್ತ ಬಸೆಟ್ಟಿ ಎಂಬುವನ ಮಗ ಲಿಂಗಶೆಟ್ಟಿ ಎಂಬುವನು ತಂದೆಯನ್ನು ಕೊಂದು ತಾಯಿಯ ಸಂಗಡ ಭೋಗಿಸುತ್ತಾ ಇಲ್ಲಿ ಕಾರುಬಾರು ಮಾಡಿದ್ದೇ ಕುರುಹು. ಇದು ಯಾವಗೆಂದರೆ ದುರ್ಮುಖಿ ನಾಮ ಸಂವತ್ಸರ ಶ್ರಾವಣ ಬಹುಳ ೫ ಸೋಮವಾರ ಆರಂಭ ಮಾಡಿಕೊಂಡು ೧ ತಿಂಗಳು ಮತ್ತೊಂದು ತಿಂಗಳಲ್ಲಿ ನಡೆಯುವದು. ಒಬ್ಬ ಪುರುಷನಿಗೇ ಮಂದಿ ಸ್ತ್ರೀಯರು ಹಂಬಲ ಬಿದ್ದು ಹೋಗುವರು. ಅವನು ಬೆಸತ್ತು ಮರವನ್ನೇರಿಕೊಂಡರೂ ಬಿಡರು. ಈ ವೇಳೆಗೆ ಸ್ತ್ರೀಯರುಗಳ ಉಪದ್ರವವು ಅತಿಯಾಗಿ ಹೆಚ್ಚುವದು ಚಂದ್ರಾದಿತ್ಯರು ೩ ದಿವಸದ ವರೆಗೆ ಅಡಗ್ಯಾರು. ಎಲ್ಲಿ ನೋಡಿದರೂ ಕಾರ್ಗತ್ತಲೆ ಆದೀತು. ಇದು ಎಂದು ಎಂದರೆ ದುರ್ಮುಖಿ ನಾಮ ಸಂವತ್ಸರದ ಮಾರ್ಗಶಿರ ಬಹುಳ ೫ ಸೋಮವಾರ ಉತ್ತರಾಷಾಢ ನಕ್ಷತ್ರದಲ್ಲಿ ಆಗುವದು. ಭೂತಗಳು ಘನವಾದೀತು. ಮಿಡಿತೇ ದಂಡು ಹೆಚ್ಚುವದು ರಾಯಚೂರು ಎಂಬ ಪಟ್ಟಣದ ಸುತ್ತಲೂ ಕತ್ತಲೆ ಕವಿದೀತು.

## .... ಪದ ....

ಮುಚ್ಚೀದ ಕದಗಾಳು ತೆರೆಯದಾದೆ ಹೋದೀತು ಕೇಳಿರಣ್ಣಾ |
ಗುಡಗುಂಟಿ ಸೀಮೆ ನಿರ್ಜಯಲಾಗಿ ಹೋಗುವದೂ ನೋಡಿರಣ್ಣಾ

ಗಾಣದೊಳಗಿನ ಎಣ್ಣೆ ಗಾಣಾನೆ ನುಂಗೀತು ಕೇಳಿರಣ್ಣಾ ।
ಜನಗಳಿಗೆ ಅನ್ನಾವು ಕಾಣಾದೆ ಹೋದೀತು ನೋಡಿರಣ್ಣಾ ।
ರಾಣಿಯು ನುಂಗ್ಯಾಳು ಮದುವ್ಯಾದ ಗಂಡನ್ನ ಕೇಳಿರಣ್ಣಾ ।
ಮಾವಟಿಗ ನುಂಗುವನು ಮದಗಜಾದಾನೇಯ ನೋಡಿರಣ್ಣಾ ।
ರಾಹುತ ಕುದುರೆಯು ಮುದದಿಂದ ನುಂಗುವನೂ ಕೇಳಿರಣ್ಣಾ ।

## ....ವಚನ....

ಮದುವೆಗಳು ಮಾಡುವರೆ ಒಟ್ಟಿಗಳಿಗೆ ೧೨ ತೆಂಕಿಗೆ ೧ ಬೀಳೇಸೀರೆ ಯಾಗುವದು. ರೂಪಾಯಿಗೆ ಸವ್ವಾಸೇರು ಎಣ್ಣೆ ಮಾರುವದು ಇದು ಯಾವಾಗೆಂದರೆ ದುರ್ಮುಖಿ ನಾಮ ಸಂವತ್ಸರದ ಪುಷ್ಯ ಮಾಸದಲ್ಲಿ ಆಗಬೇಕು.

## .... ಪದ ....

ಏಳು ವರುಷದ ಹುಡುಗಿ ಒಂಬತ್ತು ಹಡೆದಾಳು ಹೇಳಿರಣ್ಣಾ ।
ಕೇಳಿದರೊಳಗೊಂದು ಪಿಂಡಾವು ಹುಟ್ಟೀತು ನೋಡಿರಣ್ಣಾ ।
ಪೇಳೂತಾ ಬರುತಾದೆ ಪಿಂಡಮುಂದಣ ಸುದ್ದಿ ಕೇಳಿರಣ್ಣಾ।

## ....ವಚನ....

ಇದು ಯಾವಾಗೆಂದರೆ ದುರ್ಮುಖೀ ನಾಮ ಸಂವತ್ಸರದಲ್ಲಿ ಕಲ್ಯಾಣ ಪಟ್ಟಣದಾಚೆ ೩೬೦ ಗಾವುದ ದೂರದಲ್ಲಿ ಶ್ರೀ ರಾಮಪುರದ ಶಿವ ಬ್ರಾಹ್ಮಣನ ಹೊಟ್ಟೆಯಲ್ಲಿ ಒಂದು ಹೆಣ್ಣು ಕೂಸು ಹುಟ್ಟುವದು. ಆಕೆ ಗಂಡಸಿಲ್ಲದೆ ಏಳು ವರ್ಷದಲ್ಲಿ ಗರ್ಭಿಣಿಯಾಗಿ ೯ ಮಕ್ಕಳನ್ನು ಹಡೆದಾಳು ಅವರೊಳಗೆ ಎಂಟು ಮಕ್ಕಳ್ಳ ಹೋದಾವು ಒಂದು ಕೂಸು ಹಿಂದೆ ಆದದ್ದು ಮುಂದೆ ವೀರ ವಸಂತರಾಯನು ಚನ್ನಬಸವರಾಜ ದೇವರು ಬರುವಂಥಾ ಕುರುಹನ್ನು ಹೇಳಿ ದುಂದುಭಿ ನಾಮ ಸಂವತ್ಸರದ ಮಾಘ ಶುದ್ಧ ೧೫ ಮಂಗಳ ವಾರ ದಿವಸ ೩ ಘಳಿಗೆಗೆ ಸೂರ್ಯಗ್ರಹಣ ಹಿಡಿದು ೫ ಘಳಿಗೆಗೆ ಬಿಟ್ಟೀತು.

## .... ಪದ ....

ಮಠಮಾನ್ಯದವರೆಲ್ಲ ಕೆಟ್ಟು ಭ್ರಷ್ಟರಾದರೂ ಕೇಳಿರಣ್ಣಾ ।
ವಿರಕ್ತಮಠದೊಳಗೆ ನಾರ್‍ಯಾರು ಸೇರ್‍ಯಾರು ನೋಡಿರಣ್ಣಾ ।
ತೊಟ್ಟಾಲು ಕಟ್ಯಾರು ಜೋ ಎಂದು ಪಾಡುವರು ಕೇಳಿರಣ್ಣಾ ।
ತಂಗೀಯು ಒಡಗೂಡಿ ಸಂಗಾವ ಮಾಡ್ಯಾರೂ ನೋಡಿರಣ್ಣಾ ।
ಜಂಗೂಳಿ ದೈವಕ್ಕೆ ಚನ್ನಾಗಿ ಎರಗ್ಯಾರು ಕೇಳಿರಣ್ಣಾ ।
ಲಿಂಗ ಉಳ್ಳವರಿನ್ನು ಹೊಲತೀಯ ಕೂಡ್ಯಾರು ನೋಡಿರಣ್ಣಾ ।
ಜಂಗಮರೆಲ್ಲಾರು ಲಿಂಗ ಬಿಟ್ಕೊಂತಾರೂ ಕೇಳಿರಣ್ಣಾ ।
ಲಿಂಗ ಕಟ್ಟಿದವರೆಲ್ಲಾ ಮಾಂಸವ ಸವಿದಾರು ನೋಡಿರಣ್ಣಾ ।
ಹಂಗೀಸಿ ನೂರೊಂದು ಕುಲವು ಕೂಡುಂಡಾರೂ ಕೇಳಿರಣ್ಣಾ ।
ಅಣಕವಾಗಿ ಜರಿದು ಜಂಗಾಮ ಬಿಟ್ಟುಂಡಾರು ನೋಡಿರಣ್ಣಾ ।
ಏಳು ಊರಿಗೆ ಒಂದು ಊರುಗಳಾದಾವು ಕೇಳಿರಣ್ಣಾ ।
ಜೋಳಾವ ಕಾಣದೆ ಮನೆ ಮನೆತಿರುಗ್ಯಾರು ನೋಡಿರಣ್ಣಾ ।
ಏಳು ವರುಷದ ತನಕ ಆರೇಳು ರಾಜ್ಯಾವ ಕೇಳಿರಣ್ಣಾ ।
ದಕ್ಷಿಣದಿಂದ ಉತ್ತರ ತನಕ ಆಳ್ಯಾರು ನೋಡಿರಣ್ಣಾ ।
ಸೋಗೇನವಲಿನಂತೆ ಬರಿ ಮೋಲ ತಿರುಗೀತು ಕೇಳಿರಣ್ಣಾ ।
ಮೇಘಾದ ಮಳೆಯನ್ನು ಮಾಯೆ ತಾ ನುಂಗ್ಯಾಳು ನೋಡಿರಣ್ಣಾ ।
ಮೂರುಗಾವುದಕೊಂದು ಸಂತೇಯು ಕೂಡೀತು ಕೇಳಿರಣ್ಣಾ ।
ಹತ್ತುಗಾವುದಕೊಂದು ಪಟ್ಟಣವಾದೀತು ನೋಡಿರಣ್ಣಾ
ದಕ್ಷಿಣದಿಂಡ ಉತ್ತರ ತನಕ ಆದೀತು ಕೇಳಿರಣ್ಣಾ ।
ಉಳುತೇಯ ಮೇಲೇರಿ ಉರುಳೀತು ಗುಂಡೊಂದು ನೋಡಿರಣ್ಣಾ
ತಿಳಿಯಾದೆ ಹೋದಿತು. ಮರ್ತ್ಯದ ಜನರೀಗೆ ಕೇಳಿರಣ್ಣಾ

## .... ವಚನ ....

ಇದು ಯಾವಾಗೆಂದರೆ ರುಧಿರೋದ್ಗಾರಿ ನಾಮ ಸಂವತ್ಸರದ ಅಶ್ವೀಜ ಶುದ್ಧ ೯ ಭಾನುವಾರ ಶ್ರಾವಣ ನಕ್ಷತ್ರದಲ್ಲಿ ೨೫ ಘಳಿಗೆ ಮೇಲೆ ಸಿಹಿ ವಿಹವಾಗುವದು ವಿಷ ಸಿಹಿಯಾಗುವದು.

## —ಪದ—

ಕೊಟ್ಟಿದ್ದು ತನ್ನಾದು ಇಟ್ಟಿದ್ದು ಯಾರಾದು ಕೇಳಿರಣ್ಣಾ
ಕೊಟ್ಟಿದ್ದು ಒಡ್ಡೀಗೆ ತಿರುಗಿ ಬಾರದದ್ದು ನೋಡಿರಣ್ಣಾ
ಇಟ್ಟಿದ್ದು ನೆಲದೊಳಗೆ ಬೈಲಾಗಿ ಹೋಗುವದೂ ಕೇಳಿರಣ್ಣಾ
ನೀರೀಗೆ ಹೋದವರು ನೀರಲ್ಲಿ ಮಡಿದಾರು ನೋಡಿರಣ್ಣಾ
ಊರಿಗೆ ಹೋದವರು ಊರಲ್ಲಿ ಮಡಿದಾರೂ ಕೇಳಿರಣ್ಣಾ
ಪಟ್ಟು ಪಟ್ಟಾವಳಿ ಉಡುವರು ಎಲ್ಲಾರು ನೋಡಿರಣ್ಣಾ
ತಟ್ಟನೆ ಮಡಿದಿಸ್ನ ನೆಟ್ಟಾನೆ ಹೋದಾರು ಕೇಳಿರಣ್ಣಾ
ಸೊನ್ನಾಲಪುರದೊಳಗೆ ಒಂಟಿ ಮುಖ ಹುಟ್ಟುವದೂ ನೋಡಿರಣ್ಣಾ

## --ವಚನ--

ಇದು ಸತ್ಯ ಸಿದ್ಧಾಂತವೆಂದು ರುದ್ರಮುನಿ ಸ್ವಾಮಿಗಳು ನಿರೂಪಿಸಿದ್ದ ಕಾಲ ಜ್ಞಾನವು ಯುಕ್ತವಲ್ಲವೆಂದವರು ಶ್ವಾನಶೂಕರ ಜನ್ಮಗಳಲ್ಲಿ ಹುಟ್ಟುವರು.

## —ಪದ—

ಯಾದವಗಿರಿ ಸುತ್ತ ಭೂತಗಳು ಹೆಚ್ಚ್ಯಾವು ಕೇಳಿರಣ್ಣಾ
ಸೀತಾಳವುರಿದೆದ್ದು ಪಾತಾಳಕಿಳಿದಾವೂ ನೋಡಿರಣ್ಣಾ
ಮಾತು ತಪ್ಪಿದರೆ ಬಸವಣ್ಣನಾಣೆಯು ಕೇಳಿರಣ್ಣಾ
ಸೀತಾಳವು ಭೀಮಾರಥಿ ಪುಷ್ಪ ಆಧಾರವು ನೋಡಿರಣ್ಣಾ

## —ವಚನ—

ಇದು ಯಾವಾಗೆಂದರೆ ರುಧಿರೋದ್ಗಾರಿ ನಾಮ ಸಂವತ್ಸರದ ಆಶ್ವೀಜ ಬಹುಳ ೧೨ ಶನಿವಾರ ಧನಿಷ್ಟ ನಕ್ಷತ್ರದಲ್ಲಿ ೬ ಗಳಿಗೆಯ ಮೇಲೆ ಕೆಂಡದ ಮಳೆ ೩ಗಾವುದ ಸುತ್ತಲೂ ಸುರಿದೀತು. ಇದು ಆಶ್ವೀಜ ಬಹುಳ ೧೩ ಭಾನುವಾರ ಶತಭಿಷ ನಕ್ಷತ್ರದಲ್ಲಿ ೪ ಗಳಿಗೆಯ ಮೇಲೆ ಗುಂಡುಗಳು ತೇಲೀತು ಚೆಂಡುಗಳು ಮುಳುಗೀತು. ಚೆಂಡು ಎಂದು ಮುಳುಗಬೇಕೆಂದರೆ

ಇದೇ ಅಶ್ವೀಜ ಬಹುಳ ೧೫ ಸೋಮವಾರ ಉತ್ತರಾ ಭಾದ್ರಪದ ನಕ್ಷತ್ರ ದಲ್ಲಿ ೭॥ ಗಳಿಗೆಯ ಮೇಲೆ ಮಜ್ಜಿಗೆಯೊಳಗಿನ ಬೆಣ್ಣೆ ಮುಳುಗಬೇಕು. ಇದೇ ಅಶ್ವೀಜ ಬಹುಳ ೧೦ ಮಂಗಳವಾರ ಸಂಪೂರ್ಣವಾಗಿ ತೇಲಬೇಕು.

## —ಪದ—

ದಕ್ಷಿಣ ದಿಕ್ಕೀಲಿ ಹುಟ್ಟುವನು ಎಡಕುಂಟೆ ಕೇಳಿರಣ್ಣಾ
ಕಿತ್ತು ಹಾಕುವ ಠಾಣ್ಯ ಠಾಣ್ಯಗಳೆಲ್ಲವಾ ನೋಡಿರಣ್ಣಾ
ಗುತ್ತೀಯ ಸೀಮೆಗೆ ಮಿತ್ತಾಗಿ ಬರುತಾನೆ ಕೇಳಿರಣ್ಣಾ
ಎತ್ತು ಮಾರಾವಗೆ ಕಟ್ಟಾವ ಕಟ್ಟುವ ನೋಡಿರಣ್ಣಾ

## —ವಚನ—

ಶೀಖೇಂದ್ರ ಪಾಶ್ವಾನ ಠಾಣ್ಯಾವು ಎಂದು ಬೀಳಬೇಕೆಂದರೆ ರಕ್ತಾಕ್ಷಿ ನಾಮ ಸಂವತ್ಸರದ ಆಷಾಢ ಶುದ್ಧ ೫ ಸೋಮವಾರ ಹುಬ್ಬಾ ನಕ್ಷತ್ರದಲ್ಲಿ ೬॥ ಘಳಿಗ್ಗೆ ಬಂದು ಬೀಜಾಪುರದ ತಖ್ತೆ ಏರುವನು. ೩ ತಿಂಗಳು ರಾಜ್ಯ ವನ್ನು ಆಳುವನು. ಅಲ್ಲಿಗೆ ಕಿರೀಟರಾಮರಾಜನು ೯ ಲಕ್ಷ ದಂಡು ತೆಗೆದು ಕೊಂಡುಶಿಖೇಂದ್ರಪಾಶ್ವನ ಮೇಲೆ ಕಿರೀಟ ರಾಮರಾಜನು, ಚಕ್ರಾಯುಧದಿಂದ ಅವನ ತಲೆಯನ್ನು ಹೊಡೆಯುವನು ಈತನ ತಲೆಯು ಅಂತರಿಕ್ಷಕ್ಕೆ ಹಾರಿ ಭೋ ಎಂದು ಕೂಗುವದು. ಕಿರೀಟ ರಾಮರಾಜನ ಸೈನ್ಯದಲ್ಲಿ ೯೦೦೦ ಜನಗಳು ಮಡಿದು ಹೋಗುವರು. ಇದು ಯಾವಾಗೆಂದರೆ ರಕ್ತಾಕ್ಷಿ ನಾಮ ಸಂವತ್ಸರದ ಭಾದ್ರಪದ ಶುದ್ಧ ೮ ಶುಕ್ರವಾರ ೭ ಘಳಿಗೆಯ ಮೇಲೆ ಆತನ ತಲೆಯನ್ನು ಆನೆ ಅಂಬಾರಿಯೊಳಗೆ ಮೆರೆಯಿಸಿಕೊಳ್ಳುತ್ತಾ ಬಂದು ಸಿಂಹಾ ಸನದ ಮೇಲೆ ಇಟ್ಟು ಗೋರಿಯನ್ನು ಕಟ್ಟಿಸಿ ೮೩ ಬಂಗಾರದ ಕಲಸಗಳನ್ನು ಇಟ್ಟು ಗುಮ್ಮಟವನ್ನು ಕಟ್ಟಿಸುವರು. ಆ ಗೋರಿಯ ಮೇಲೆ ಕೈಲಾಸ ದಿಂದ ಮಲ್ಲಿಗೆ ಹೂವಿನ ಮಳೆಗರೆವರು. ಕೊರಡು ಚಿಗರೀತು ಬರಡು ಹಯ ವಾದೀತು. ಒಂದೇ ದೇವರಾಗಿಯೂ ಪೂಜೆಯನ್ನು ಕೊಳ್ಳುವದು.

ಕಲ್ಲುಬುರ್ಗಿಯಲ್ಲಿ ದೇವರ ಪೂಜೆಯು ಮಧ್ಯಾಹ್ನ ನಿಂತು ಹೋದೀತು ಆಮೇಲೆ ಶಿಖೇಂದ್ರ ಪಾಶ್ವಾನ ಗೋರಿಯ ಪೂಜೆ ನಿಂತೀತು. ಈ ಪರ್ರ್ಯಾದೆಯಲ್ಲಿ ಆದೀತು. ಆಮೇಲೆ ನಮ್ಮ ಗಣಂಗಳು ಹೊರಟು ಬಂದಾರು. ಕ್ರೋಧನ ನಾಮ ಸಂವತ್ಸರದಲ್ಲಿ ಏನೇನು ಆಗುವುದೆಂದರೆ ಅಂಗೈಯೊಳಗೆ ಕಣ್ಣುಗಳಿರುವವರು ಬರುತ್ತಾರೆ. ತಲೆಯ ಮೇಲೆ ಕೋಡುಗಳು ಮೂಡಿದವರು, ೫ ಮುಖ, ೧೦ ಭುಜಗಳು ಇದ್ದವರು ಸಹ ಬರುತ್ತಾರೆ. ಜಲಸ್ತಂಭನ ದೂರದೃಷ್ಟಿ, ದೂರ ಶ್ರವಣ ಈ ಪ್ರಕಾರದಿಂದ ಬಂದಾಗ್ಯೂ ಅವರನ್ನು ನಂಬಬಾರದು. ಕ್ರೋದನ ನಾಮ ಸಂವತ್ಸರದಲ್ಲಿ ಶ್ರೀ ಬಸವೇಶ್ವರ ದೇವರು ಬಂದಾರು ವೀರ ವಸಂತರಾಯನು ಬರುತ್ತಾನೆಂದು ಹೇಳಿದಾಗ್ಯೂ ಒಂದು ಕಾಲಕ್ಕೂ ನಂಬಲಾಗದು. ಅವರು ಬರುವಂಥ ಸೂಚನೆ ಎಂದು ಬರುವದೆಂದರೆ ಅಕ್ಷಯ ನಾಮ ಸಂವತ್ಸರದ ಚೈತ್ರ ಶುದ್ಧ ೧ ಶುಕ್ರವಾರ ರೇವತಿ ನಕ್ಷತ್ರದಲ್ಲಿ ವಿರುಪಾಕ್ಷೇಶ್ವರನು ಹೇಮಕೂಟದ ಮಠಕ್ಕೆ ಬಂದಾನು. ಶ್ರೀ ವೈಷ್ಣವರು ೫೦೦ ಮಂದಿ ಸೊನ್ನಲಾಪುರದ ಸಿದ್ಧರಾಮೇಶ್ವರನ ಕೆರೆಯೊಳಗೆ ಬಿಳಿ ಆನೆಯು ಹುಟ್ಟಿ ಬಯಲಿಗೆ ಹೊರಟೀತು. ಆ ಆನೆಯನ್ನು ತೆಗೆದುಕೊಂಡು ಬಂದು ವೀರ ವಸಂತರಾಯನಿಗೆ ಕೊಟ್ಟಾರು. ಆ ವೀರ ವಸಂತರಾಯನು ಆನೆಯನ್ನು ತೆಗೆದುಕೊಂಡು ಏನು ಮಾಡಬೇಕೆಂದು ಕೇಳುವನು.

### - ಪದ -

ವೀಭೂತಿ ಇಟ್ಟವರ ಹಣೆಗಳ ಕೆತ್ತಿಶ್ಯಾನೂ ಕೇಳಿರಣ್ಣಾ |
ಪೂರೈಸಿ ಲಿಂಗಾದ ನಿರ್ಣಯವ ಕೇಳ್ಯಾರೂ ನೋಡಿರಣ್ಣಾ
ಹಾರುವರ ಜುಟ್ಟೀಗೆ ಹಗ್ಗವ ಕಟ್ಟಿಶ್ಯಾನೂ ಕೇಳಿರಣ್ಣಾ |
ಹೋರಾಟವಾದೀತು ಕಲಿಯುಗದೊಳಗಿನ್ನೂ ನೋಡಿರಣ್ಣಾ |
ಸೂರ್ರ್ಯಾನ ಕೆಳಗಿನ್ನು ಸುರಚಾಪ ಮೂಡೀತು ಕೇಳಿರಣ್ಣಾ

### - ವಚನ -

ಹಸರು ತೇಜಿಯನ್ನೇರಿ ತ್ರಿಜಗದೊಲ್ಲಭನಾದಂಥಾ ಚನ್ನಬಸವೇಶ್ವರ ದೇವರು ಸತ್ಯ ಬೀಜವನ್ನು ಹುಡುಕುತ್ತಾ ಬರುತ್ತಾರೆ. ಸಣ್ಣವಾಜಿಯುಳ್ಳ

ವಗೆಪಟ್ಟವನ್ನು ಕಟ್ಟುವರು. ಮೂಜಗವು ಕೆಟ್ಟು ಬಂದೀತು. ಶ್ರೀ ಚನ್ನ ಬಸವೇಶ್ವರ ದೇವರು ಬರುವುದ್ಯಾವಾಗೆಂದರೆ- ಅಕ್ಷಯನಾಮ ಸಂವತ್ಸರದ ಕಾರ್ತೀಕ ಶುದ್ಧ ೮ ಶುಕ್ರವಾರ ಸ್ವಾತಿ ನಕ್ಷತ್ರದಲ್ಲಿ ೧೮ ಗಳಿಗೆಯ ಮೇಲೆ ಹಸರು ತೇಜಿಯ ಮೇಲೆ ಕುಳಿತುಕೊಂಡು ೭೭೦ ಅಮರಗಣಂಗಳೂ ೬೦ ಮಂದಿ ಪುರಾತನರನ್ನೂ ೧೨೦೦೦ ಜಂಗಮರ ಸಮೂಹವನ್ನೂ ಹಿಂದಿಟ್ಟುಕೊಂಡು ಬರುವರು. ಅವರಿಗಿರುವ ರೂಪು ಎಂಥಾದ್ದೆಂದರೆ ಡಮರುಗ ಹಸ್ತದಲ್ಲಿ ಹಿಂದಿರಬೇಕು. ಕರೇ ಕಂಬಳಿ ಪಂತೆಯನ್ನೂ ಕಾಮನ ಭಸ್ಮವನ್ನೂ ಸಂಪೂರ್ಣವಾದ ಪರಮ ರುದ್ರಾಕ್ಷಿಯನ್ನು ನಾಗಚಿತ್ತ ವನ್ನೂ ಕೈಯಲ್ಲಿ ಹಿಡಿದುಕೊಂಡು ಮುತ್ತಿನ ಹಾವುಗೆ ಮೆಟ್ಟಿಕೊಂಡು ಪರಮಾತ್ಮನಾದ ಶ್ರೀ ಚನ್ನಬಸವೇಶ್ವರ ದೇವರು ಬರುತ್ತಾ ವ್ಯಾಸರಲ್ಲಿ ಪೂಜೆಯನ್ನು ತೆಗೆದುಕೊಂಡು ಶ್ರೀ ನಂದೀಶ್ವರ ಬೆಟ್ಟಕ್ಕೆ ಬಂದು ನಂದೀ ಶ್ವರನ ದರ್ಶನ ಮಾಡಿಕೊಂಡು ೧೨೦೦೦ ಜಂಗಮಾರ್ಚನೆ ಮಾಡಿಸಿ ಅಲ್ಲಿಂದ ವಿರುಪಾಕ್ಷೇಶ್ವರನ ಬಳಿಗೆ ಬಂದು ಪೊಂಪಾಪುರವನ್ನು ಹೊಕ್ಕು ವೀರ ವಸಂತರಾಯನ ಸಂಗಡ ಪ್ರಸಂಗವನ್ನು ಮಾಡುವರು, ಶಿವಾಚಾರ ವನ್ನು ಕೆಡಿಸಿ ವಿಷ್ಣುಪರನನ್ನು ಏನು ಕಾರಣ ಮಾಡಿದರೆಂದು ಕೇಳುವಲ್ಲಿ ಅದಕ್ಕೆ ವೀರ ವಸಂತರಾಯನು ಹೇಳುವುದೇನೆಂದರೆ ವಿಷ್ಣು ಪಾದದಲ್ಲಿ ಗಂಗೆ ಹುಟ್ಟಿದಳು ಎಂದು ಹೇಳವರು. ಅದಕ್ಕೆ ಶ್ರೀ ಚನ್ನಬಸವೇಶ್ವರ ದೇವರು ೨೦ ಯುಗಗಳಲ್ಲಿ ಮಾಯೆಯು ಹುಟ್ಟಿದಳೆಂದು ಹೇಳುವರು. ಇದಕ್ಕೆ ವೀರ ವಸಂತರಾಯನು ಕಲಿಯುಗದಲ್ಲಿ ವಿಷ್ಣು ಹುಟ್ಟಿದನೆಂದು ಹೇಳುವನು. ೨೮ ನೆಯ ಅವತಾರ ಈಶ್ವರನು ಹುಟ್ಟಿದನೆಂದು ಇವರು ಹೇಳುವರು. ಹೀಗೆ ಇಬ್ಬರು ವಾದಿಸುತ್ತಿರಲು ಅಲ್ಲಿಗೆ ವಿರುಪಾಕ್ಷೇಶ್ವರ ದೇವರು ಜಂಗಮ ರೂಪಿನಿಂದ ಬಂದು ನೀವು ವಾದಿಸತಕ್ಕ ಕೆಲಸವಿಲ್ಲ ಪಾತಾಳ ಗಂಗೆಯನ್ನು ಯಾರು ಬತ್ತಿಸುತ್ತಾರೋ ಅವರೇ ಗುರುವಾಗಿ ಬನ್ನಿ ಎಂದು ಹೇಳುವರು. ಅಲ್ಲಿಂದ ವಿರುಪಾಕ್ಷೇಶ್ವರನ ಸ್ಥಳವನ್ನು ಬಿಟ್ಟು ಪರ್ವತದಲ್ಲಿ ಪಾತಾಳ ಗಂಗೆಯ ಸಮೀಪಕ್ಕೆ ಹೋಗುವರು. ಇದು ಯಾವಾ ಗೆಂದರೆ ಅಕ್ಷಯ ನಾಮ ಸಂವತ್ಸರದ ಮಾರ್ಗಶಿರ ಶುದ್ಧ ೧೦ ಸೋಮವಾರ ರಾತ್ರಿ ೩ ಘಳಿಗೆಗೆ ಕದಳೀ ವನಾಂತರದಿಂದ ಪ್ರಭುದೇವರು ಹೊರಟು

ಬಂದು ಶ್ರೀ ಚನ್ನಬಸವೇಶ್ವರ ದೇವರಿಗೆ ಕ್ರಿಯಾಚಾರ ಪದ್ಧತಿ ಮುಗಿಸಿ ಕೊಟ್ಟು ಪಾತಾಳಗಂಗೆಯೊಳಗೆ ಶ್ರೀ ಚನ್ನಬಸವೇಶ್ವರ ದೇವರು ತಮ್ಮ ಪಾದವನ್ನು ಇಡಲಿಕ್ಕಾಗಿ ಮಾರ್ಗಶಿರ ೧೧ ಮಂಗಳವಾರ ೩ ಗಳಿಗೆ ಮೇಲೆ ಕಿರಣವು ಬೀಳುವದು. ಪಾತಾಳಗಂಗೆಯಲ್ಲಿ ಚಂದ್ರಗುಪ್ತ ಮಹಾ ರಾಜನು ಬೈಲಿಗೆ ಬೀಳುವನು. ೭ ಗಜದ ಉದ್ದ ಕಲ್ಲಿನ ಮೇಲೆ ಶ್ರೀ ಚನ್ನ ಬಸವೇಶ್ವರ ದೇವರು ಲೋಕಪಾವನಮೂರ್ತಿಯಾದ ಬಸವೇಶ್ವರನೂ ಬಂದು ಚಿಲುಮೆಯನ್ನು ತೆಗೆದು ಆ ಶೀತಳದಲ್ಲಿ ತಮ್ಮ ಪಾದವನ್ನು ತೊಳೆಯಲು ಅತನ ಶಾಪವು ನಿಶ್ಶಾಪವಾಗುವದು.

ಆಮೇಲೆ ವೀರ ವಸಂತರಾಯನಿಗೆ ಭಕ್ತಿ ಹುಟ್ಟುವದು ಸಾಷ್ಟಾಂಗ ನಮಸ್ಕಾರ ಮಾಡುವನು. ೫೦೦ ಮಂದಿ ವೈಷ್ಣವರು ಬಂದು ನಮಗೆ ಲಿಂಗಧಾರಣೆ ಮಾಡಬೆಕೆಂದು ಶ್ರೀ ಚನ್ನಬಸವೇಶ್ವರರನ್ನು ಬೇಡಿಕೊಂಡರು. ಆಗ ವೀರ ವಸಂತರಾಯನು ಕಂಕಣ ಕಟ್ಟಿ ಪಂಚಚಾಮರವನ್ನು ಕೊಡಿಸಿ ಏಕಾಂತರಾಮಯ್ಯನವರೂ ಪಂಡಿತಾರಾಧ್ಯರೂ ಲೋಕಪಾವನ ಮೂರ್ತಿ ಮರುಳ ಶಂಕರದೇವರೂ ಶ್ರೀ ಸಿದ್ಧನಂಜುಂಡೇಶ್ವರದೇವರು ಈ ಐದು ಮಂದಿ ಪಂಚಾಚರದವರನ್ನು ಕೂಡಿಸಿ ದೀಕ್ಷಾನುಗ್ರಹವನ್ನು ಮಾಡುವರು. ಮಾರ್ಗಶಿರ ಶುದ್ಧ ೧೫ ಶನಿವಾರ ರಾತ್ರಿ ೨೮ ಘಳಿಗೆಯ ಮೇಲೆ ಲಿಂಗಧಾರಣೆಯಾಗುವದು, ೧೦೧ ಜಾತಿಯವರಿಗಿನ್ನು ಆ ಕಾಲದಲ್ಲಿ ೧೨೧೫ ಮಂದಿ ಮುಸಲ್ಮಾನರಿಗೂ ಸಹ ಲಿಂಗವನ್ನು ಧರಿಸುವರು. ಆ ಕಾಲದಲ್ಲಿ ಹೊನ್ನು ತೂಕ ವಿಭೂತಿ ಮಾರುವದು, ೫ ವರಹಾರಕ್ಕೆ ಒಂದು ಲಿಂಗವಾದೀತು. ಮೂರು ವರಹಾಕ್ಕೆ ೧ ರುದ್ರಾಕ್ಷಿ ಮಾರುವದು. ಈ ಪ್ರಕಾರವಾಗಿ ಅಲ್ಲಿಂದ ಕೂಗಿನಮಾರಯ್ಯನ ತಂದೆಗಳು ಹುಟ್ಟಿ ಕೂಗುತ್ತಾ ಬಂದಾರು. ಅಲ್ಲಿಂದ ಭಕ್ತಿಯು ಪ್ರಬಲವಾಗುವದು.

ಶ್ರೀ ಚನ್ನಬಸವೇಶ್ವರ ದೇವರು ವೀರವಸಂತರಾಯನೂ ಸಹಾ ವೆಂಕಟಾಚಲ ಮೂರ್ತಿಯ ಬೆಟ್ಟಕ್ಕೆ ಬಂದು ಅಲ್ಲಿರುವ ವೆಂಕಟರಮಣ ಮೂರ್ತಿಗೆ ಲಿಂಗಧಾರಣೆಯನ್ನು ಸ್ಥಾಪ್ಯವನ್ನು ಮಾಡಿ ಲಿಂಗಧಾರಣೆ ಮಾಡುವರು ಅಲ್ಲಿ ೮೦ ಕೋಟಿ ದ್ರವ್ಯವನ್ನು ತೆಗೆದುಕೊಂಡು ಹಂಪೆಯ

ಸ್ಥಳಕ್ಕೆ ಹೊರಟು ಬಂದು ಹಂಪೆಯ ಸುತ್ತಾ ಕೋಟೆಯನ್ನು ಕಟ್ಟಿಸುವರು. ಅಲ್ಲಿಯ ತುಂಗ ಪರ್ವತವನ್ನು ಕಟ್ಟಿಸಿ ೨೫೦೦೦ ಜಂಗಮಾರ್ಚನೆಯನ್ನು ಮಾಡಿಸುವರು. ವಿರುಪಾಕ್ಷ ದೇವರ ಪೂಜೆ ಮಾಡಿಸಿ ಕಲ್ಲುತೇರು ಎಳೆಸುವರು. ಶ್ರೀ ಚನ್ನಬಸವೇಶ್ವರ ದೇವರು ಒಂದು ಹಸ್ತದಿಂದಲೂ ವೀರ ವಸಂತರಾಯನು ಒಂದು ಹಸ್ತದಿಂದಲೂ ಲೋಕಪಾವನಮೂರ್ತಿಯನ್ನು ಮೂಹೂರ್ತನ ಮಾಡಿಸುವರು. ರಥೋತ್ಸವವನ್ನು ಮಾಡಿಸಿ ವಾಲಿ ಭಾಂಡಾರಕ್ಕೆ ಬಂದು ಭಂಡಾರದೊಳಗಿನ ಭಾಗ್ಯವನ್ನೆಲ್ಲಾ ತೆಗೆದುಕೊಂಡರೂ ಭಂಡಾರದೊಳಗಿಂದ ಲಕ್ಷ್ಮಿ ದೇವಿಯು ಹೊರಟು ಬಂದು ನಿಮ್ಮ ದ್ರವ್ಯ ನಿಮಗೆ ಮುಟ್ಟಿತೆಂದು ಹೇಳಿ ಒಪ್ಪಿಸಿ ಅದೃಶ್ಯಳಾಗುವಳು.

ಕಲ್ಲುಕೋಳಿ ಕೂಗಿತು ಮುಲ್ಲಾನು ಬಂದು ಚೂರಿ ಹಾಕುವನು. ಸುತ್ತ ಮೂರುಗಾವುದ ಸುದ್ದಿ ಕೇಳ್ಯಾರು. ಅಲ್ಲಿ ಕೊಲ್ಲಿಪಾಕಿ ಸೋಮನಾರಾಧ್ಯರ ಬಳಿಗೆ ಹೋದಾರು. ಪುಷ್ಯ ಶುದ್ಧ ೫ ರಲ್ಲಿ ೪೦೦೦ ಜಂಗಮಾರ್ಚನೆ ಮಾಡ್ಯಾರು. ಅಲ್ಲಿಂದ ಕಲ್ಯಾಣಕ್ಕೆ ಬರುವುದರೊಳಗೆ ಏನು ಆಗುವುದೆಂದರೆ ಭವನವೇ ಭೂಕೈಲಾಸವೆನಿಸುವದು. ಎಲ್ಲಿ ನೋಡಿದರಲ್ಲಿ ಭೋಗ ಭೋಗ್ಯಾನಂದವಾದಿತು. ಪ್ರಭಾವ ನಾಮ ಸಂವತ್ಸರದಲ್ಲಿ ಬಾಲಿಕಿಗೆ ಬಂಧಾರು. ಅಲ್ಲಿ ಬಲಿಗೇಶ್ವರ ದರ್ಶನ ಮಾಡಿಕೊಂಡು ೩ ಕೋಟಿ ಲಿಂಗ ಬಯಲಿಗೆ ಬಂದಾವು.

ಇಂತಿಷ್ಟನ್ನು ಪೂಜೆ ಮಾಡಿಸಿ ೭೯೦೦೦ ಜಂಗಮಾರ್ಚನೆಯನ್ನು ಮಾಡಿಸಿಕೊಂಡು ಕಲ್ಯಾಣಕ್ಕೆ ಬಂದಾರು ಗಣಂಗಳನೆಲ್ಲಾ ಕರೆಯಲಿಕ್ಕೆ ದೊರೆ ಗೌಲ ಮಂತ್ರಿ ಪ್ರಜೆಪಾಲಕರೆಲ್ಲಾರಂ ಕರೆಯಿಸಿ ಈ ಪ್ರಕಾರ ಕಳುಹುತ್ತಾ ಬಂದಾರು. ಪರಿಪಟಿಯ ವಾದ್ಯದಿಂದ ಕುಂಡಲೇಶ್ವರನ ದರ್ಶನವಂ ತೆಗೆದುಕೊಂಡು ಈ ಸಭಾ ಮಂಟಪಕ್ಕೆ ಬಂದಾರು.

ಲೋಕಪಾವನಮೂರ್ತಿ ಚನ್ನಬಸವರಾಜ ದೇವರು ವೀರವಸಂತರಾಯನು ಅಕ್ಕ ನಾಗಲಾಂಬಿಕೆಯ ದರ್ಶನ ತೆಗೆದುಕೊಂಡು ನೋಟ ಹರ್ಷದಿಂದ ನೋಡ್ಯಾರು. ನರದೇಹವಾದಾಳು. ಸಮಸ್ತಗಣಂಗಳು ಕೂಡಿ

ಬಿಜ್ಜಳನ ಅರಮನೆಗೆ ಬಂದಾರು. ಶಾಪುರಿಪೇಟೆಗೆ ಕಾವಲು ಕೊಟ್ಟಾರು ಸುತ್ತಕೋಟೆಗಳ ಕಟ್ಟಿಸ್ಯಾರು. ೯ ಗಜ ಭೂಮಿ ಬಿಚ್ಚಿ ಪ್ರಭುಸಿಂಹಾಸನ ಹೊರಟೀತು. ಆ ಮೇಲೆ ಪ್ರಭವ ನಾಮ ಸಂವತ್ಸರದ ಚೈತ್ರ ಶುದ್ಧ ೧ ಸೋಮವಾರ ರೇವತೀ ನಕ್ಷತ್ರದಲ್ಲಿ ೧೨ ಘಳಿಗೆಯ ಮೇಲೆ ಮುಹೂರ್ತ ಮಾಡಿಸ್ಯಾರು. ಮಾಡುವ ಸಮಾರಂಭದಲ್ಲಿ ತ್ರಿಪುರಾಂತಕದ ಕೆರೆ ನೀರು ಕಪ್ಪಾದಾವು. ಕಲ್ಲುತೇರು ಬಯಲಾದೀತು. ತ್ರಿಪುರಾಂತಕದ ಕೆರೆಯ ಮೇಲೆ ಲಿಪಿಗಳನ್ನು ಓದುವರು. ಕೆರೆ ಮಲ್ಲಿಗೆ ಪುಷ್ಪವಾದಾವು ಉಮಾ ಪುರದ ಗಣೇಶನನ್ನು ಕಿತ್ತು ಬಿಟ್ಯಾರು. ೩ ಕೋಟಿ ದ್ರವ್ಯ ತೆಗೆದುಕೊಂಡು ವೀರ ವಸಂತರಾಯನಿಗೆ ಹೊನ್ನಿನ ಅಭಿಷೇಕವನ್ನು ಮಾಡಿಸ್ಯಾರು. ಬಿದ ನೂರು ಕೋಟಿಯೊಳಗೆ ವೀರ ಸಂಗಪ್ಪನ ಗದ್ದಿಗೆ ಸಮೀಪಕ್ಕೆ ಒಂದು ಕೋಟಿ ದ್ರವ್ಯವನ್ನು ತೆಗೆದಾರು. ಸಮಸ್ತ ದ್ರವ್ಯವಂ ಖರ್ಚು ಮಾಡಿ ಕಲ್ಯಾಣ ಪಟ್ಟಣ ಕಟ್ಟಿಸುವರು. ದೆಸೆದೆಸೆಗೆ ೧೧ ಯೋಜನ ಪ್ರಮಾಣ ಅದಕ್ಕೆ ೩೬೦ ಬಾಗಿಲು ೭೭೦ ದಿಡ್ಡಿಗಳು. ೯೬ ಚೋರದಿಡ್ಡಿಗಳು ನವರತ್ನ ಕೆತ್ತಿಸಿದ ಕದಗಳು. ಸೂರ್ಯನ ಬೀದಿ, ಚಂದ್ರನ ಬೀದಿ ಚನ್ನಬಸವರಾಜ ದೇವರ ಮಠದ ವಿಸ್ತಾರ ಏನೆಂದರೆ—

ದೆಸೆದೆಸೆಗೆ ನಾಲ್ಕು ಯೋಜನದ ಪ್ರಮಾಣ ಅದರ ಬಾಗಿಲು ವಿಭೂತಿ ಕದಗಳು ವಿಭೂತಿ ಮುಸುಕು ವಿಭೂತಿ ಹೊಸಲುಗಳು, ಸಮಸ್ತವೂ ವಿಭೂತಿಮಯ. ಮತ್ತೊಂದು ಬಾಗಿಲು ರುದ್ರಾಕ್ಷಿ ಕದಗಳು ರುದ್ರಾಕ್ಷಿ ಮುಸುಕು ರುದ್ರಾಕ್ಷಿಸೂಸಕ ಅಲ್ಲಿಯ ಪ್ರಮಾಣವು ಪಂಚಾಕ್ಷರಿಯ ಶಾಸನವು ಮಿಕ್ಕ ೩೯ ಬಾಗಿಲು ವಜ್ರವೈಢೂರ್ಯ ಮೊದಲಾದ ನವರತ್ನ ಕೆತ್ತಿಸಿದ ಕದಗಳು ಅಲ್ಲಿ ಶಿವನ ಅಪೇಕ್ಷೆ ಇಲ್ಲದೆ ಇರುವವರುಂಟು. ಅಚ ಪ್ರಸಾದಿಗಳು ಮಠಗಳೂ ೧೬೦೦೦ ಚಿಲಿಮೆ ಅಗ್ಗಣಿ ಮಠಗಳು ೧೫೦೦ ಗುರುಲಿಂಗ ಜಂಗಮಕ್ಕೆ ತನುಮನಧನಂಗಳು ಅರ್ಪಿಸುವ ಮಠಗಳು ೧ ಲಕ್ಷ ಇಂತಪ್ಪ ಕಲ್ಯಾಣ ಪಟ್ಟಣವನ್ನು ಮಾಡಿ ೧೨೦೦೦ ವರ್ಷಗಳು ಅವರವಂಶದವರು ಆಳಬೇಕು. ಚನ್ನಬಸವರಾಜದೇವರು ಇರುವದು ೩೬ ವರ್ಷ ವೀರವಸಂತರಾಯನಿರುವದು ೬೦ ವರ್ಷ ಆಮೇಲೆ ಬೈಲಿಗೆ ಬೈಲು.

ಅದಾರು ಪ್ರಭವನಾಮ ಸಂವತ್ಸರದಲ್ಲಿ ಬಾರದಿದ್ದರೆ ಪ್ರಮಥರಾಣೆ ೧೯೯೦೦೦ ಗಣಂಗಳ ಪಾದದಾಣೆ ಈ ಮಾತು ಸಟೆಯೆಂದವರಿಗೆ ಶ್ವಾನ ಸೂಕರ ಜನ್ಮ ತಪ್ಪದು. ಚಂದ್ರ ಸೂರ್ಯರಿರುವ ತನಕ ನರಕ ತಪ್ಪದು ಇದು ಸಿದ್ಧಾಂತವೆಂದು ರುದ್ರಮುನಿ ಸ್ವಾಮಿಗಳು ನಿರೂಪಿಸಿದ ಕಾಲ ಜ್ಞಾನವು ಉದಯಕಾಲ ಮಧ್ಯಾಹ್ನ ಕಾಲ ಸಾಯಂಕಾಲದಲ್ಲಿ ಪಠಿಸಿದವ ರಿಗೆ ಧನಧಾನ್ಯ ಕನಕ ವಸ್ತು ವಾಹನ ಛತ್ರಚಾಮರ ಅಂದಣ ಮೊದಲಾದ ಐಶ್ವರ್ಯ ಪ್ರ ಬ್ರಾಹ್ಮಣರು ನಿಂದೆ ಮಾಡಿದರೆ ಕಾಶಿಯಲ್ಲಿ ಗೋಹತ್ಯ ಮಾಡಿದ ಫಲವು ಶಿವಭಕ್ತರು ನಿಂದೆ ಮಾಡಿದ್ದಕ್ಕೆ ಪರ್ವತದಲ್ಲಿ ಲಿಂಗ ದ್ರೋಹ ಮಾಡಿದ ದೋಷಕ್ಕೆ ಗುರಿಯಾಗುವರು. ಇದು ಸಿದ್ಧಾಂತವೆಂದು ರುದ್ರಮುನಿಗಳು ನಿರೂಪಿಸಿದ ಕಾಲಜ್ಞಾನಾವಮಾಂಕಿತವನ್ನು ದಾವಣಗೆರೆ ತಾಲ್ಲೂಕಿಗೆ ಸೇರಿದ ಅಣಜಿ ದ್ಯಾಮವ್ವನಹಳ್ಳಿ ಬ್ರಹ್ಮ ತೀರ್ಥಾಶ್ರಮ ನಿವಾಸಿಗಳಾದ ಮಂತ್ರಯೋಗಿ ಪಂಡಿತ ಶ್ರೀ ರೇವಣಜ್ಜನೆಂಬ ಜೋತಿಷ್ಯ ಕಾಲಜ್ಞಾನಿಗಳು ಶಿವಶಕ್ತಿ ಕಾಲಜ್ಞಾನವೆಂದು ಸಾರುತ್ತಾ ಬ್ರಹ್ಮತೀರ್ಥಾ ಶ್ರಮದಲ್ಲಿ ಮಳೆಗಾಲದ ಚಾತುರ್ಮಾಸ ವ್ರತ ಪ್ರಕರಣದ ತಮ್ಮ ಅಧ್ಯಾತ್ಮ ಬ್ರಹ್ಮಲಿಂಗದೇವರ ಸನ್ನಿಧಿಯಲ್ಲಿ ಪಠಣಿಗೈದಿರುವರೆಂಬಲ್ಲಿಗೆ ಶಿವಶಕ್ತಿ ಕಾಲಜ್ಞಾನ ದ್ವಿತೀಯಸರ್ಗ ಪರಿಚ್ಛೇದಃ



# ಯಮ್ಮಯ್ಯ ಬಸವಣ್ಣನವರ ಕಾಲಜ್ಞಾನವು

## —ಪದ—

ಕುಂಭಿಣಿ ಕೂಗೀತು ಜಂಬೂಕ ಹೊರಟೀತು ಹುಯ್ಯಾಲೆ ಡಂಗುರವಾ ।
ಜಂಬೂಕ ಕೋಡು ಜಗವವಾಚ್ಯಾವು ಹುಯ್ಯಾಲೆ ಡಂಗುರವಾ ॥
ಹೊಗೆಬಂಡಿ ಬಂದು ಖಂವಂದು ಆದೀತು ನಗೆಗೇಡು ಆದೀತು
ಶ್ರೀರಂಗಪಟ್ಟಣ ಹುಯ್ಯಾಲೆ ಡಂಗೂರವಾ॥

ಬಲವುಳ್ಳ ಮಂತ್ರಿ ಚಲುವು ತಾ ಕೆಟ್ಟೀತು ಮನ್ಮಥ ಸದದಾಂತ
ವೀರ ವಸಂತಾನ ಬರುವಾ ಹುಯ್ಯಾಲೆ ಡಂಗುರವಾ । ಕಾನ

ಕಾನಸರೆಲ್ಲ ದಕ್ಷಿಣಕೆ ನಡೆದಾರು ಹುಯ್ಯಾಲಿ ಡಂಗೂರವಾ |
ಕಾನನಕೆ ನಡೆದಂತೆ ದಕ್ಷಿಣ ಭಾಗಾದಿ ಹುಯ್ಯಾಲಿ ಡಂಗೂರವಾ||
ಶೀರ್‍ಯಾದ ರೋಗಾನಶಿರವ ಕೊಯ್ದರೂ ಹುಯ್ಯಾಲಿ ಡಂಗೂರವಾ |
ತೋರಣ ಕಟ್ಯಾರು ಬಾಗಿಲಿಗೆ ಅವನನ್ನು |ಹು| ಊರೂರು ಕೇರೀಲಿ
ಹಾದರವ್ಹೂ ಹೆಚ್ಚೀತು |ಹು| ಜಾರೇರು ಹೆಚ್ಚಾರು ಜಗವೆಲ್ಲ ಕೆಟ್ಟೀತು |ಹು|
ತುರಕರ ದೆಸೆಯಿಂದ ಕಿರಿಕಿರಿ ಆದೀತು ||ಹು

ಅರ್ಥವುಳ್ಳವರೆಲ್ಲ ನೆತ್ತಿಯ ನೊಡೆದಾರು |ಹು| ಕಾಲಾನ
ಬಾಧೆಯ ಮರೆತಾರು ತುರಕಾರು |ಹು| ವಿಜಯ ನಗರದಲ್ಲಿ
ಗಜಿಬಿಜಿಯಾದೀತು ||ಹು|| ಮಧ್ಯ ಕಲ್ಯಾಣ ಕೈಸೆರೆ ಹಿಡಿದಾರು
|ಹು| ಬರಗಾಲ ದೇಶದ ಹುಡುಗ ತಾ ಬಂದಾನು ||ಹು||
ಮಡದಿ ಮಕ್ಕಳ ಸಹವಾಗಿ ಬಂದಾನು |ಹು| ಮುನ್ನೂರುಗಾವುದವನ್ನು
ತಾನೇರ್‍ಯಾನು |ಹು| ಕನ್ನಡ ದೇಶಕ್ಕೆ ಕಡೆ ಮೊದಲಿಲ್ಲದೆ ಅನ್ಯಾಯ
ಹೆಚ್ಚೀತು ಆತನ ದೆಸೆಯಿಂದ |ಹು| ಹನ್ನೆರಡು ವರ್ಷ ಕಡೆಗಾಲ
ಆತಗೆ |ಹು| ರಾಮೇಶ್ವರದಲ್ಲಿ ರಕ್ತಾವ ತೊಳೆದಾರು ||ಹು||
ರಾಮಲಿಂಗನ ಪೂಜೆ ತಾವು ಸವಳಿದಾರು ||ಹು|| ಅಲ್ಲಿ
ಕತ್ತಾಲ ಕವಿದೀತು ಕರ್ಮಾವು ಹೆಚ್ಚೀತು ||ಹು|| ಇಲ್ಲಿ
ಇದ್ದವರೆಲ್ಲ ನೆತ್ತೀಯ ಹೊಡೆದಾರು ||ಹು|| ಕಾಲನ
ಬಾಧೆಯನರಿತಾರು ತುರುಕಾರು ||ಹು||

ಬಿದಿರಿನಪ್ಪಾನಹಳ್ಳಿ ಠಾಣ್ಯಾವ ಮಾಡ್ಯಾರು ||ಹು|| ರಾಯನ
ಹೆಸರನು ಅರಿಯನು ಆತನೂ ಆವಾಗ ಹುಸ್ಸೇನಿ ಛಲವು ತಾ ಕೆಟ್ಟೀತು
|ಹು| ರಾಮರ ದೆಸೆಯಿಂದ ಸೀಮೆಯ ಬಿಟ್ಟಾರು |ಹು| ಸೂರಾಮಾರಾನ
ದ್ರವ್ಯ ವಶವಿನ್ನು ಆದೀತು |ಹು| ಗಿಡಗ ಭಕ್ತರೆಲ್ಲ ಗಿಡಗಾನ ಕಟ್ಯಾರು |ಹು|
ನಡೆದು ಹೋದೀತು ರಾಢಿಯ ದೇಶಕ್ಕೆ ||ಹು ರಾಮರಾಜರ
ದಂಡು ಸೀಮೆಯ ಹಿಡಿದಾರು | ಕಾಮಲಪುರದ ಬೈಲಲ್ಲಿ
ನಿಂತಾರು | ಹೇಮಕೂಟಕ್ಕೆ ಪ್ರೇಮದಿಂ ಬಂದಾರು |ಹು|
ಕಾಮಿಕ ಫಲಗಳ ಬೇಡುತ್ತಾ ಕೊಡುವಾರು ಹು

ಹುಗ್ಗಿಯ ಹುಯಿಸಾರು ಮಾಯಾನಗರಕ್ಕೆ |ಹು| ನಗ್ಗಾವಲರಮನೆ
ಗಾಳು ಕಟ್ಯಾರು ||ಹು|| ಸ್ವರ್ಗಲೋಕಾ ಮೆಚ್ಚಿ ಭರ್ಗನ ಕೃಪೆಯಿಂದ
ಎಂಟು ವರುಷಕ್ಕೆ |ಹು| ಸೊಂಟಾರಗಾಳಿ ಎದ್ದೆಂಟು ವರುಷಕ್ಕೆ ||ಹು||
ಕಂಟಾಕ ಅವನಿಗೆ ದೊರಕೀತು ಆವಾಗ ಸತ್ಯವನ್ನೇ ಬಿಟ್ಟು ಹುಚ್ಚೆದ್ದು
ತಿರುಗ್ಯಾರು |ಹು| ಮತಚಾರ್ಯರಚ್ಚೆದ್ದು ಮುಸುಗೀತು
ಮುಂದಿನ್ನು |ಹು| ತಾ ನಡೆದೀತು ರೂಢೀಯ ದೇಶಕ್ಕೆ |ಹು|
ಬಿಟ್ಟೆ ಪಟ್ಟಣ ಬಿಡದೆ ತಾನಾಳ್ಯಾನು |ಹು| ಸಟೆಯಿಲ್ಲ
ಈ ಮಾತು ಶಿವನಾಣೆ ಮುಂದಿನ್ನೂ ||ಹು||
ತುಂಗಭದ್ರೆ ಭೀಮರಥಿಗಾಗಿ ಬಂದಾರು ||ಹು|| ಹಂಗೆಗೆ ಬಂದಾರು
ಗೋದಾವರಿ ನದಿ ತೀರ್ಥಕ್ಕೆ |ಹು| ವಾರಾಣಿ ಅಲ್ಲಿ ರಾಮಾನ
ತೀರ್ಥಕ್ಕೆ |ಹು| ಕಾರುಣ್ಯ ಸ್ಥಳಗಳ ಮಾಡ್ಯಾರು ಮುಂದಿನ್ನು |ಹು|
ಪಾಂಡೊರಂಗಗೆ ಹೋ ವಿಠಲನ ತೆಗೆದಾರು | ತಕ್ಕೊಂಡು
ಬಂದಾರು ವಿಜಯನಗರಕ್ಕೆ | ನಂಬಿ ಹೇಳಿದ ಮಾತು
ಯಮ್ಮಯ್ಯ ಬಸವಣ್ಣ ಹುಯ್ಯಾಲಿ ಡಂಗೂರವಾ ||

○○○

## ನೀಲಮ್ಮನವರು ಹೇಳಿದ ಕಾಲಜ್ಞಾನದ

## ಸುವ್ವಿ ಪದ

ಸುವ್ವಿ ಬಾ ಸಂಗಯ್ಯ, ಸುವ್ವಿ ಬಾ ಲಿಂಗಯ್ಯ, ಸುವ್ವಿ ಬಾ
ಚನ್ನಬಸವಯ್ಯ ಸುವ್ವಿ |ಪ| ಸುವ್ವಿ ಬಾ ಚನ್ನಬಸವಯ್ಯ ಬರುವಾಗ
ಹುಯ್ಯಾಲ ಬೊಬ್ಬೆಜಿಗಕ್ಕೆಲ್ಲಾ | ಸುವ್ವಿ| ಅಕ್ಕ ನಾಗಮ್ಮಾನು
ಚಿಕ್ಕವನಿಕೆಯ ಹಿಡಿದು ಅಕ್ಕಿವಮ್ಮಾನ ತಳಿಸುತ್ತಾ ||ಸುವ್ವಿ||
ಅಕ್ಕಿವಮ್ಮಾನ ತೊಳಿಸುತ್ತ ಪಾಡಿದರು ಮುಕ್ಕಣ್ಣ ಶಿವನು
ಬರುವಾಗ |ಸುವ್ವಿ| ಕುಟ್ಟೋಣ ಬನ್ನಿರಿ ಪಟ್ಟಣದ ಸತಿಯಾರು
ಹುಟ್ಟು ಕರ್ಮಗಳು ಅಳಿವಂತೆ ಸುವ್ವಿ | ಹುಟ್ಟು ಕರ್ಮಗಳು
ಅಳಿವಂತೆ ತೊಳೆಸುತ್ತ ಪಟ್ಟಣಕ್ಕೆ ಶಿವನು ಬರುವಾಗ |ಸುವ್ವಿ|

ನಮ್ಮಯ್ಯ ಬರುವಾಗ ಉಮ್ಮಾಯ ಶರಣಾರು | ಕರ್ಮದ ಲೋಕಾ
ಉಳಿಯಾವು |ಸು| ಕಮತದ ಲೋಕ ಉಳಿಯಾವು ಮುಂದಿನ್ನು ಧರ್ಮವ
ಗುರುಬಸವ ಬರುವಾಗ |ಸು| ಕಾರುಣೀಕವು ದಿನವು ಮುಂದಿನ್ನು
ಘೋರಪಾತಕ ದಿನ ಬಂತು ಸುವ್ವಿ | ಏಳೂರಿಗೊಂದೂರು ೨ಳು

ಸುತ್ತಿನಕೋಟಿ ಹಾಳಾಗುತ್ತಿದೆ ಜಗವೆಲ್ಲಾ ಸುವ್ವಿ|
ಹಾಳಾಗುತ್ತಾವೆ ಜಗವೆಲ್ಲ ಮುಂದಿನ್ನು ಬೂಳಂಕ್ಕಸಿ
ಬರುವಾಗ ಸುವ್ವಿ | ದಿನಮಾನ ದುರ್ಗಿಯ ಅನುವಾಗಿ
ಬರುವಾಗ ಮನುಜಾರ ದುಃಖ ವಿಪರೀತ ಸುವ್ವಿ |
ಮನುಜಾರ ದುಃಖ ವಿಪರೀತ ಮಹಾಮ್ಮಾಯಿ ಘನ

ದಂಡು ಕೂಡಿ ಬರುವಾಗ ಸುವ್ವಿ ‖ ಅಗಾರ ಅಳಿದಾವು ಗೂಗೆಗಳೆದ್ದಾವು
ಕಾಗೇಯ ದಂಡು ಬರುವಾಗ ಸುವ್ವಿ | ಕಾಗೇಯ ದಂಡು ಬರುವಾಗ
ಜಗವೆಲ್ಲ ಕೂಗು ಬೊಬ್ಬೆಗಳು ಮನೆಮನೆಗೆ ಸುವ್ವಿ |ಅಣ್ಣಗಳ
ದಿನಗಾಳು ಸಣ್ಣಾಗಿ ಬರುವಾಗ ಕಣ್ಣೀಲಿ ಕಾಣೆವೆನಬ್ಯಾಡೀ |ಸುವ್ವಿ

ಕಣ್ಣೀಲಿ ಕಾಣೆವೆನಬ್ಯಾಡಿ ಮುಂದಿನ್ನು ಮಣ್ಣು ಹುಯಿಕೊಂಬೊ
ದಿನ ಬಂತು ಸುವ್ವಿ | ಅಗ್ಗಾದ ದಿನಗಳು ಮುಗ್ಗೂತ
ಬರುವಾಗ ಸುಗ್ಗಿ ಹೋಳಿಗೆ ಕನಸೀನ ಸುವಿ|
ಕಾಣದೆ ಬೊಬ್ಬೆ ಹೊಯಿಕೊಂಬ ದಿನ ಬಂತು |

ಬೀಸೀತು ಬಿರುಗಾಳಿ ಈಶಾನ್ಯ ದಿಕ್ಕೀಲಿ | ದೇಶಮಂಡಲವ
ಮುಸುಕೀತು ಸುವ್ವಿ | ದೇಶಮಂಡಲವ ಮುಸುಕೀತು ಕೆಂದೂಳು
ಮೋಸ ಮಾಡುವದು ಮಳೆಗಾಲ ಸುವ್ವಿ | ಬಚ್ಚಲದೊಳಿಹಗಾಳು!
ಹಸ್ತಾಯ ಶರಣರಿಗೆ ಎಚ್ಚರಿಕಿರುಬೇಕು ಉದಕಕ್ಕೆ ಸುವ್ವಿ |

ಈ ಮಾತು ಹುಚ್ಚುನುಡಿ ಎಂದು ಎನಬ್ಯಾಡಿ ಸುವ್ವಿ |
ನಾಲ್ಕು ದಿಕ್ಕಿನ ಮೂತಿ ಏಕಾಶಿ ಉದರಿತು | ಲೋಕಾದ
ಕರ್ಮ ಅಳಿದೀತು ಸುವ್ವಿ | ಲೋಕಾದ ಕರ್ಮ ಅಳಿದಿತು
ಮಹಾಮ್ಮಾಯಿ ಪಾಕ ಮಾಡುವಳು ಧರಣೀಯ ಸುವ್ವಿ|

ಆ ಸಮಯ ದುರ್ಗೀಯು ಕಸವಿಕ್ಕಿ ಗುಡಿಸುತ್ತಾ ಹಸನು ಮಾಡುವಳು
ಧರಣೀಯ ಸುವ್ವಿ | ಹಸನು ಮಾಡುವಳು ಜಗವೆಲ್ಲ ಮಹಾಮ್ಮಾಯಿ
ದೆಸೆಯ ನೋಡುವಳು ಶರಣರ ಸುವ್ವಿ | ಕಾಲ ಮೇಘದಿ ಮಳೆಯು
ಸೂರ್ಯನ ನುಂಗುವದು | ಮೂರೇಳು ದಿನವು ಮುಳುಗುವದು ಸುವ್ವಿ||

ಮೂರೇಳು ದಿನವು ಮುಳುಗುವದು ಮರ್ತ್ಯಕ್ಕೆ ವೀರ ವಸಂತ
ಬರುವಾಗ ಸುವ್ವಿ | ಹುಟ್ಟಿದೇಳು ದಿವಸಕ್ಕೆ ಬೆಟ್ಟಗಳು
ನಡಿಗ್ಯಾವು ಬೆಟ್ಟದ ಗುಂಡು ಉರುಳ್ಯಾವು | ಚನ್ನ
ಬಸವಣ್ಣ ಸೃಷ್ಟಿಪಾಲಕರು ಬರುವಾಗ ಸುವ್ವಿ | ಚಂದ್ರ

ಸೂರ್ಯರ ಗ್ರಹಣ ಒಂದೇ ಮಾಸದಿ ಬರಲು ತಂದೆಯ ಕೊಂದು
ಮರುದಿನಕ್ಕೆ ನಂದಿವಾಹನ ಬಸವ ಬರುವಾಗ ಸುವ್ವಿ | ಅಡು ಆನೆ
ಯನು ನುಂಗಿ ಕಾಡಾನೆಗಳೆರಡು ಗಿರಿಮಾಡಿ ಮುಂದಿನ್ನು ಮೂಢ
ಜನರಿಗೆ ತಿಳಿಯದು ಸುವ್ವಿ | ಇಲಿ ಬೇಕ್ಕು ನುಂಗೀತು ಮಲನಾಯಿ

ಕಡೆದೀತು ಹೇಲಿ ಹುಲ್ಲೀ ಗಳಿಸಿ ಕದನಾವು ಮುಂದಿನ್ನು
ಮೂಢ ಮನುಜರಿಗೆ ತಿಳಿಯಾದು ಸುವ್ವಿ | ಹುಲ್ಲಿ ಹುಲಿಗಳ
ನುಂಗಿ ನುಂಗಿ ಆ ಮರಿಗಳ ಕಡಿದು ಕಲ್ಲೀನ ಕಪ್ಪೆ
ಸರ್ಪಾನ ಸುವ್ವಿ | ಕಲ್ಲಿನ ಕಪ್ಪೆ ಸರ್ಪಾನ ನುಂಗುವದು

ಪೊಳ್ಳುಮನುಜರಿಗೆ ತಿಳಿಯಾದು ಸುವ್ವಿ | ಅತ್ತೆ ಅಳಿಯನ ಹೊಡೆದು
ಕುತ್ತಿಗೆಯ ಮುರಿಯುವಳು ರಕ್ತಾವ ಕುಡಿದು ನಗುವಾಳು ಅದ
ಕಂಡು ಮತ್ತೆ ಮೊಮ್ಮಗನು ಅಳುತ್ತಿದ್ದ ಸುವ್ವಿ | ಹೆಂಡತಿ ಗಂಡಾನ
ಹೊಡೆದು ಮಂಡೆಯ ನೊಡೆವಳು ಕಂಠ ರಕ್ತಾವ ಸುರಿಸುವಳೂ |ಸುವ್ವಿ|

ಕಂಡ ರಕ್ತಾ ಸುರಿಸುವಳು ಅದಕಂಡ ರಂಡೆಯ ಮಗನು
ಅಳುತ್ತಿದ್ದ ಸುವ್ವಿ| ಕತ್ತಾಲೆ ಜ್ಯೋತಿಯು ಮುತ್ತಿತಾ
ನುಂಗುವಳು ಹೆತ್ತ ತಾಯಿಯ ಮಗಳು ಅಮೈಕ್ಯ
ಮಾಡುವಳು ಇದರರ್ಥ ಮನುಜರಿಗೆ ತಿಳಿಯಾದು ಸುವ್ವಿ||

ಅಟ್ಟಾ ಅಡಿಗೆಯನು ಉಟ್ಟೊಂದು ನುಂಗುವದು ಶರದೀಯು ಸುವ್ವಿ॥
ಉಟ್ಟೊಂದು ನುಂಗುವದು ಶರದೀಯು ಚನ್ನಬಸವನು ಹುಟ್ಟಿ
ತಾನೆದ್ದು ಬರುವಾಗ ಸುವ್ವಿ | ಶರಣಾರ ವಾಖ್ಯದಿಂ ವೀರವಸಂತ
ಹುಟ್ಟಿ ವರುಣ ದಿಕ್ಕಿಗೆ ಬಂದು ಕುಳಿತಾನು ಸುವ್ವಿ | ವರುಣ

ದಿಕ್ಕಿಗೆ ಬಂದು ಕುಳಿತಾನು ವಸಂತಕಿರಣ ಸೂರ್ಯನ
ಬೆಳಕೀಲಿ ಸುವ್ವಿ | ಶಾಪಕ್ಕೊಳಗಾದವರು | ಭೂಪ
ರಿಬ್ಬರು ಕೂಡಿ ಶ್ರೀ ಪರಂಜ್ಯೋತಿ ಕಲ್ಯಾಣಕ್ಕೆ
ಬರುವಾಗ | ಸುವ್ವಿ | ನಾರೀ ನೀಲಮ್ಮನು

ಸಾರಿರೋಳಿದ ಮಾತು ವೀರ ವಸಂತ ಚನ್ನ ಬಸವ |ಸುವ್ವಿ|
ವೀರ ವಸಂತ ಚನ್ನ ಬಸವಣ್ಣ ಶರಣರಿಗೆ ಸಾರಿದ ಪಟ್ಟ
ಅವರೀಗೆ ಸುವ್ವಿ ॥ ನೀಲಮ್ಮನವರ ಕಾಲಜ್ಞಾನ ಪದ ಸಂಪೂರ್ಣಂ

ooo

## ಕಾಲಜ್ಞಾನದ ಮಹತ್ವದ ಪದ

ಸುಳ್ಳು ಸುಳ್ಳೆನ್ನುತ್ತಾರೆ ಕಾಲಜ್ಞಾನ ಸುಳ್ಳಾಗಬಲ್ಲುದೇನೋ |
ಕಲ್ಯಾಣದವರು ಹೇಳಿದ ಮಾತು ಸಟೆಯಲ್ಲ ಬಲ್ಲವರು
ಬಲ್ಲರಣ್ಣಾ ॥೧॥

ಅಣ್ಣ ತಂಗಿಯ ಹೋಗಲಿಲ್ಲೆ | ಮುಂದಿನ್ನು ಸಣ್ಣ ನಾಮ
ದವನು ಬರುವುದಿಲ್ಲೆ | ಬಣ್ಣಾದ ಅರಮನೆ ಹಾಳು ಬಿದ್ದಂತದನು
ಕಣ್ಣೀಲೆ ಕಾಣಲಿಲ್ಲೆ ॥೨॥

ಕದಕೇಳುವೆತ್ತಲಿಲ್ಲೆ ಒಡಹುಟ್ಟಿದಕ್ಕಾನ
ಬಡವಾರು ಬಱಿದಾಡಿ ಮನೆಮನೆಗೆ ಕೂಳಿಗೆ ಭಿಕ್ಷವನು
ಬೇಡಲಿಲ್ಲೆ ॥೩॥

ಸೆನ್ಯಾಕೆಟ್ಟಿದ್ದಿಲ್ಲೆ ಹೆನ್ನುಳ್ಳ ಅರದಿಗರು ಅಣಿಯಲಿಲ್ಲೆ ।
ಅನ್ಯಾಯ ಹೆಚ್ಚಾಗಿ ಅಷ್ಟದಿಕ್ಕಿನ ಸೂರೆ ಇನ್ನ್ಯಾರು ಕಾಣಲಿಲ್ಲೆ ।
ರಂಡೆಯರ ಮನೆಗೆ ಅಣ್ಣಾ । ಗರ್ಭಿಣಿಯರಾ ಕೆಡುವರಣ್ಣಾ
ಗಂಡಗೂ ಮಿಂಡಾಗೂ ಒಂದೇ ಪಂಕ್ತಿಯಲ್ಲಿ ಊಟ
ದಂಡಪೂರಿಗೆಗಳಣ್ಣಾ ॥೪॥

ಹೊಲಮನೆ ಉದ್ಯೋಗವು ಕೆಟ್ಟು ಮಳೆ ಬೆಳೆಗೆಗಳತಿಶೂನ್ಯವು
ಹಲವು ಪರಿಯಲಿ ಚಿಂತೆ ಸುಖ ಜನರಿಗೆಲ್ಲಾ ಇಲ್ಲ ಕಲಹ
ಊರೂರಿಗಣ್ಣ ॥೫॥

ಧರ್ಮವು ಮುಳುಗಲಿಲ್ಲೆ ಮನೆಮನೆಗೆ ಕರ್ಮವು ಹೆಚ್ಚಾಲಿಲ್ಲೆ।
ಅರಮನೆಯವರ ನಾಲಿಗೆ ನಾಲಿಗೆ ತಪ್ಪಿ ರೊಕ್ಕವನು ನೇಮ
ನೇಮದಿ ಸುಲಿಯಲಿಲ್ಲೆ ॥ ॥

ಅರಸು ಆಳಾಗಲಿಲ್ಲೆ ಜಗದೊಳಗೆ ಗರತಿ ಸೂಳ್ಯಾಗಲಿಲ್ಲೆ ।
ನರಗುರುವೆನಿಸಿ ನಲಿದಾಡೋದಿಲ್ಲೆ ಸುರೆಯ ಸರ್ವರು ಕುಡಿಯಲಿಲ್ಲೆ
ಕಳವು ಬಹಳ ಹೆಚ್ಚಲಿಲ್ಲೆ । ಕಲಿಯೊಳಗೆ ಅತ್ತೆ ಅಳಿಯನ
ಹೋಗಲಿಲ್ಲೇ । ಕೊಳುಗಳು ಬಹಳವಾಗಿ ಹಿರಿಯರೊಳಗೆ
ಮರಿಯಾದೆ ತಪ್ಪಲಿಲ್ಲೆ । ಶಿವಭವಿಯನ್ನು ಹೋಗಲಿಲ್ಲೆ।

ಬಾವನರಿದು ನೀ ಹೋಗು ನ್ಯಾಯತನ ಹೇಳುವದು ಕಲಿಯೊಳಗೆ
ಕಾಣಲಿಲ್ಲೇ । ಭಾಷೆಗೆ ತಪ್ಪಲಿಲ್ಲೆ ಗಂಡನಿಗೆ ವಿಷಮದ್ದು
ನಿಕ್ಕಲಿಲ್ಲೆ । ವೇಶಿಯನು ಗುರುತ್ಯಾಗಿ ಮನೆಯೊಳಗೆ ಇರುವನು
ದೇಶದೊಳು ಕಾಣಲಿಲ್ಲೆ । ಜಂಗಮರು ಕೆಟ್ಟುದಿಲ್ಲೆ

ಲಿಂಗವನು ಕಳಕೊಂಡು ಕೆಟ್ಟದಿಲ್ಲೆ ॥ ಜಂಗೂಳಿ ದೈವಾದ
ಪೂಜೆ ಮಾಡುವದನು ಹೆಂಗ್ಯಾಕಟ ಕಾಣಲಿಲ್ಲೇ ॥
ಮದಸೊಕ್ಕಿ ಮುರಿಯಲಿಲ್ಲೆ । ಗದಗಿನೊಳು ತೇರನ್ನುಯ್ಯಲಿಲ್ಲೆ ।
ಕುಂದಿದ ರಂಗಾನು ಹಾಳಾಗಿ ಹೋದವನು ಸಾಧಿಸಿ ನೋಡಲಿಲ್ಲೆ

ಇಷ್ಟಾದರೂ ತಿಳಿಯಲಿಲ್ಲೆ ಮೌನಯ್ಯ ಪಟ್ಟಕ್ಕೆ ಬರುವುದಿಲ್ಲೆ ॥
ಕಷ್ಟ ಕಾಲವು ಬಂತು ನಾಚಿಕೆ ಬರಲಿಲ್ಲ ದುಷ್ಟರಿಗೆ ಉಳಲಿಲ್ಲವಲ್ಲಿ

÷ ಕಾಲಜ್ಞಾನದ ಮಹತ್ವ ಪರಿಪೂರ್ಣ ÷



# ಸರ್ವಜ್ಞಮೂರ್ತಿಯ ಕಾಲಜ್ಞಾನವು

ಬಸವನೆನ್ನಗೆ ನಿರುಂ | ಪಿಸದಾ ಕಾಲಜ್ಞಾನ
ಭಸಿತವನು ಇಟ್ಟು ಮರ್ತ್ಯರಿರವನು ನಿಮ್ಮ ಶಿಶುವಾಗಿ ಪೇಳ್ವೆ ಸರ್ವಜ್ಞ
ನಂಬಿ ಹೇಳುವೆ ಬಸವ | ನಿಂಬೀನ ಮಹಿಮೆಯನು |
ಶಂಭುವಿನ ಕರುಣ ನಿಮಗುಂಟು ನಾ ನಿಮ್ಮ ನಂಬಿ ಹೇಳುವೆನು ಸರ್ವಜ್ಞ

ಒಪ್ಪ ಭಸಿತವನಿಟ್ಟು | ಕರ್ಪುರ ವೀಳ್ಯವ ಕೊಟ್ಟು
ಕಪುಗೊರಳಾನ ಕರುಣದಿಂ ಇದನರಿದು ಒಪ್ಪಿ ಹೇಳುವೆನು ಸರ್ವಜ್ಞ
ಮಳೆಗಳನ್ನು ಕುಡಿಯುವನು ಬೆಳೆಗಳನ್ನು ಮುಕ್ಕುವನು |
ಬಳಗಗಳನೆಲ್ಲಾ ಮುರಿಯುವನು ಜಗದೊಳಗೆ ಉಳಿವವರ್‍ಗೆ ಇಲ್ಲ ಸರ್ವಜ್ಞ

ವೀರ ವಸಂತಾನು | ಧೀರ ಬಿಜ್ಜಳ ತಾನು
ಮೀರಿ ಕಲಿದೇವ ನಡೆದಾನು ಅವನೊಡನೆ ಹೋರುವವರಿಲ್ಲ ಸರ್ವಜ್ಞ
ಆಗಮಗಳಳಿದಾವು ಗೂಗೆ ಮರಕಿಳಿದಾವು
ಕಾಗೆಗಳು ದಂಡು ಎದ್ದಾವು ದೊರೆಗಳಿಗೆ ಕೇಡು ಬಂದಿತು ಸರ್ವಜ್ಞ

ಧಾರುಣಿಯು ನಡುಗುವದು | ಮೇರು ಅಲ್ಲಾಡುವದು
ವಾರಧಿಯು ಬತ್ತಿ ಬಯಲಹುದು ಶಿವಭಕ್ತಿ ಏರದಂದು ಸರ್ವಜ್ಞ
ಹರಗಿರಿಗುಡಿಗಳಲಿ | ಸುರೆ ಮಾಂಸ ಮಾರೀತು
ಶರಣರ್ಗೆ ಹರಣ ಪಿರಿದಾಗಿ ಜಗದಲ್ಲಿ ಹರಿದಾಳಿ ನೋಡ ಸರ್ವಜ್ಞ

ಆರೆದಾರು ಮೆರೆದಾರು । ಊರಿದಾರು ಜಗದೊಳಗೆ
ಕುರಿಗಳ ತಲೆಯ ತರಿದಂತೆ ರಕ್ತವನು ಸುರಿದಾರು ನೋಡ ಸರ್ವಜ್ಞ
ಹೆತ್ತ ತಂದೆಯ ಕೊಂದು ।ಮುತ್ತದಿಂ ವಿರುಪಾಕ್ಷ ।
ಬತ್ತಲೆಯ ಹೆಣ್ಣಿಗೊಳಗಾಗೆ ರಾಜ್ಯವದು ಕತ್ತಲಾದೀತು ಸರ್ವಜ್ಞ

ನರರ ಬಲಿಗಳ ಕೊಟ್ಟು । ಕುರಿಕೋಣಗಳ ಕಡಿದು ಸರುವ ಭಂಡಾರವನು
ಒಡೆದು ಸರುವಾರ ಶಿರಗಳ ನರಿದಾರು ಸರ್ವಜ್ಞ
ಚಂದ್ರ ಸೂರ್ಯಗ್ರಹಣ । ಒಂದೇ ಮಾಸದಿ ಬಂದು
ತಂದೆಯ ಕಂದಾನಿಂದಂದು ಲೋಕಕ್ಕೆ ಬಂದೀತು ಪ್ರಳಯ ಸರ್ವಜ್ಞ

ಸೂಳೆಯ ಮಗ ಹುಟ್ಟಿ । ಆಳುವನು ಮಣಿಪುರವ ।
ಕಾಳಗವು ಇಲ್ಲದವ ಮಡಿಯೆ ಪುರವೆಲ್ಲ ಕೋಳು ಹೋದೀತು ಸರ್ವಜ್ಞ
ಪಟ್ಟವಿಲ್ಲದ ಶಿಶುವು । ಸೃಷ್ಟಿಯನ್ನು ಆಳೀತು
ಪಟ್ಟಣ ರುಸುಗಳು ಅಳಿಯಲಾಜಿಗದವನು ಪಟ್ಟ ಕಾಣಯ್ಯ ಸರ್ವಜ್ಞ

ಬಂಟನಾ ತಮ್ಮನಾ । ಅಳಿಯಾಗೂ ಮಾವಗೂ ।
ಗಂಟಿಕ್ಕಿ ಜಗಳಹೆಣ್ಣಲಾ ಜಗಕೆಲ್ಲಾ ಕಂಟಕವು ಎಂದ ಸರ್ವಜ್ಞ
ರಂಗಪಟ್ಟಣದೊಳಗೆ । ರಂಗಭಕ್ತನು ಹುಟ್ಟಿ
ರಂಗನ ಪೂಜೆ ಬರಿದಾಗಲಾ ಪಟ್ಟ ಭಂಗವಾದೀತು ಸರ್ವಜ್ಞ

ಉತ್ತರಾ ದಿಕ್ಕಿನಲಿ । ಹತ್ತೀತು ಹೆಬ್ಬೇಗೆ ।
ಸುತ್ತವರಕೊಂಡು ಬರುವಾಗ ಜಗವೆಲ್ಲ ಕತ್ತಲಾದೀತು ಸರ್ವಜ್ಞ
ಎತ್ತು ಏರುವವಿನಿಂದ । ತೊತ್ತೀನ ಮಗನಿಂದ ।
ಮುತ್ತು ಮಾರುವನ ದೆಸೆಯಿಂದ ಜಗಕ್ಕೆಲ್ಲ ಕುತ್ತಕಾಣಯ್ಯ ಸರ್ವಜ್ಞ

ನುತ್ತೊಡೆದು ಹತ್ತಿರಲು । ಮತ್ತಾನೆಸತ್ತಿರಲು
ಹುತ್ತವನು ಏರಿ ನರಿ ಕೂಗಿ ಜಗಕೆಲ್ಲಾ ಕುತ್ತ ಕಾಣಯ್ಯ ಸರ್ವಜ್ಞ
ಕುಂಬಾರ ಹೊಟ್ಟೆಯಲಿ । ಪಿಂಜಾರ ಹುಟ್ಟುವನು ।
ಕುಂಭಿಕುಂಭಿಣಿಗಳುನಲಿಯುತಲಿ ಕುಂಭಿನಿಯೊಳಿಂಬುಗೊಂಡಾನು ಸರ್ವಜ್ಞ

ಸುತ್ತಯೋಜಿನದೊಳಗೆ |ಸತ್ತ ಹೆಗ್ಗಣಗಳ ಸುತ್ತು |
ಮುತ್ತಿದ್ದು ಹದ್ದು ಕಾಗೆಗಳ ರಾಸಿಕ | ಕಣ್ಣೆತ್ತಿ ನೋಡೆಂದ ಸರ್ವಜ್ಞ
ಪೇಟೆಯಾ ಬಸ್ತಿಯನು | ಆಟದಲಿ ಒಡೆದಾರು |
ಆಟದಲ್ಲಿ ಒಡೆದ ಆರನೆಯ ವರುಷಕ್ಕೆ ನೀಟಾಗಿ ಬರುವ ಸರ್ವಜ್ಞ

ಹೆಣ್ಣಿನಾ ದೆಸೆಯಿಂದ | ಗಣ್ಯಕ್ಕೆ ನಡೆತಂದು
ಹೆಣ್ಣೆತ್ತುಜಿಗಳ ಪಶ್ವಿಮುದಯಂತ್ರಿಗಳು ಅಣ್ಣ ಬಂದಾನು ಸರ್ವಜ್ಞ
ಕಲ್ಲುಕೊಟೆಯಲ್ಲೊಬ್ಬ | ಬಲ್ಲಿದನು ಕೆರೆಕಟ್ಟಿ
ಗೊಲ್ಲಗೊಲ್ಲರಾ ಜಗಣಲಿ ಜಗವೆಲ್ಲ ತಲ್ಲಣವು ಎಂದ ಸರ್ವಜ

**– ಸರ್ವಜ್ಞಮೂರ್ತಿ ಕಾಲಜ್ಞಾನ ಮುಗಿಯಿತು –**



**ಜ್ಞಾನ ಮಾರ್ಗದವೆರಡು ಪದಗಳನ್ನುಡಿ ಶಿವಶಕ್ತಿ ಕಾಲಜ್ಞಾನ ದಲಿ ಪೂರ್ವಾರ್ಥ ಭಾಗವನ್ನು ಮುಗಿಯಿಸಿ ಉತ್ತರಾರ್ಥ ಭಾಗವನ್ನು ಬರೆಯಲು ಅಸ್ತಿಕಾ ಶಿಖಾಮಣಿಗಳು ಆಶೀರ್ವಾದ ಮಾಡಬೇಕೆಂದು ಗ್ರಂಥಕರ್ತನು ಪ್ರಾರ್ಥಿಸುತ್ತೇನೆ**

## ಸತ್‌ಪಥ ತತ್ವ

ಜಂಗಮರು ಪರಿಯೆಂದು ಲಿಂಗೈಕ್ಯ ಪಥವೆಲ್ಲಿ | ಲಿಂಗ ಜಂಗಮ
ರೆಂಬುದದು ಪೇಳಿರಣ್ಣಾ ||ಪ||
ಷಟುಸ್ಥಲದ ನೆಲೆಯಂತು | ಮೃಡನಿರ್ಪ ಅರುವೆಲ್ಲಿ ಪಾಡುಮೃಡಸ್ಥಳ
ದೊಳಗೆ ಅಡಗಿರುವುದೆಂತೂ | ನಡೆನುಡಿಗಳನ್ನು ನಂಬಿದಡವೆಂದು
ಪೇಳಿದಿರಿ | ಮೃಡನೊಡನೆ ಬೆರೆತು ನಡೆವರೇ ಜಂಗಮರು ||೧||
ಜಂಗಮದ ಪಾದೋದಕ ಪರಿಯೇ | ಶೋಧಿಸುವ ಕ್ರಮುವನೂ|

ಶೋಧಿಸಿದುದಕವನು ಸವಿದುಂಬಿತೆಂತೂ । ನಾದವಡಗಿರುವಂತೆ
ನಾಳಿಬಂಧನವೆಲ್ಲಿ । ಇದರಾದಿಯನು ತಿಳಿದವನು ಆದಿಜಂಗಮರೂ ॥೨॥
ಅಷ್ಟವಿದ ದೇವಾರ್ಚನೆಯ ನಿಷ್ಠೆ ಮಾಡುವ ಜ್ಞಾನಿ । ಅಷ್ಟಪೂಜೆ
ಸೃಷ್ಟಿಯೊಳಗಿಹುದು । ಸೃಷ್ಟಿಯೊಳಗೊಪ್ಪಿರುನಿವನಿರುವ ಅರುವೆಲ್ಲ ।
ಇದರಿಷ್ಟವನು ತಿಳಿದವರು ನಿಷ್ಟೆ ಜಂಗಮರೂ ॥೩॥
ಪರಮ ಪ್ರಸಾದವನು ಹುರಿಗೊಳಿಸತಾವೆಂತು । ಪಿರಿದೆಂಬೊಶಿವನಿರುವ
ನೆಲೆಯಾವುದೆಂತೂ । ಗುರುವೆ ಗತಿ ಎಂದು ಅರುವು ನಿಶ್ಚಯ ಮಾಡಿ ಈ
ಅರಿವಿನೊಳು ಬೆರೆತರು ಪರಮಜಂಗಮರೂ ॥೪॥
ನಕಾರ ಉಕಾರ ಮಮಕಾರವೆಂತೆಂಬೊ । ಓಂಕಾರನಾದ ಸದ್ಗುರುವಿ
ನಂಘ್ರಿಯೊಳು । ಕಾಕೂಡಿ ಬೆರೆದಿರ್ಪ ಅವದೂತ ಮುರಹರಿಯು।
ಓಂಕಾರದೊಳಗೊಪ್ಪಿದರೂ ಜಂಗಮರೂ ॥೫॥

## ಶಿವಭಜನೆ ಪದ

ಶಿವಶಿವ ಬೇರಿಲ್ಲ । ನಿನ್ನಲ್ಲಿಹನು। ಯಾರಿಲ್ಲ । ಎಲ್ಲಿಗೆ ಹೋದರೂ ನೆಲೆ
ಇಲ್ಲ । ಕಂಡ ಕೆಲ ಕಾಲ ಬಿದ್ದರೆ ಇಲ್ಲಾ ॥ಪ ಕಾಲ ಮೇಲಕ್ಕೆ ಮಾಡಿದ
ರಿಲ್ಲ । ದೇಶ ಮೂಲೆಮೂಲೆಗೆ ತಿರುಗಿದರಿಲ್ಲ । ಮೇಲೆ ಮುಗಿಲಿಗಾರಿದರಿಲ್ಲ
ಮೇಲೆ ಮೂರುಲೋಕವನೀದಣಿದಿಲ್ಲಾ ॥೧॥
ದೃಢವಿಲ್ಲದೆ ತಿರುಗಿದರಿಲ್ಲ । ಬಡಿವಾರ ಮನಸಿನ ಬಿಂಕಲ್ಲಾ । ದೃಢ
ವಿಡಿದು ನೀನಡೆಯಲಿಲ್ಲ । ನಿನ್ನೊಡಲೊಳಗೇ ಮನಸೆರಡೆಲ್ಲಾ ॥೨॥
ನಿದ್ದೆ ಸಾವಿಗೆ ದೂರಿಲ್ಲ । ನೀ ಬುದ್ಧಿವಂತರನ ಕೇಳಿಲ್ಲಾ । ಜೀವಶಿವರಿಗೆ
ಏನು ಭೇದವಿಲ್ಲ । ಗೊತ್ತಿದ್ದ ಮಡಿವಾಳಗೆ ದೂರಿಲ್ಲ ॥ ಶಿವಶಿವ ಬೇರಿಲ್ಲ ॥೩॥

॥ಇತಿ॥

ಹರಿಹರವರಪರಾಯಣಪಯಃ ಪಾರಾವಾರಾರಾಕು ಸುಧಾಕಾರಾಯಪರ್ಾ
ದಾವಣಗೆರೆ ತಾಲ್ಲೂಕಿಗೆ ಸೇರಿದ ಆಣಜಿ ದ್ಯಾಮವ್ವನಹಳ್ಳಿ ಬ್ರಹ್ಮತೀರ್ಥಾನ
ಶ್ರಮದವಾನ ಪ್ರಸ್ಥಾಶ್ರಮ ಯತಿ ಮಂತ್ರಯೋಗಿ ಪಂಡಿತ ಶ್ರೀ ರೇವ
ಣ್ಣಜ್ಜ ಕೃತ ಶಿವಶಕ್ತಿ ಕಾಲಜ್ಞಾನೆ ಪೂರ್ವಾರ್ಧ ಭಾಗ ಪರಿಪೂರ್ಣ
ಸಮಾಪ್ತಾಯಾಂ ಶ್ರೀ ಶ್ರೀ ಶ್ರೀ

# ಉತ್ತರಾರ್ಧ ಭಾಗಪ್ರಾರಂಭ

ಸ್ವತಂತ್ರ ಭಾರತದ ಭವಿಷ್ಯವನ್ನು ತಿಳಿಯಲು ಕ್ರಿ. ಶ. ೧೮೮೫ ನೇ ಇಸ್ವಿ ಡಿಸೆಂಬರ ತಾರೀಖು ೨೮ ನೇ ದಿನ ಬೆಳಿಗ್ಗೆ ೯ ಘಂಟೆ ೫೧ ನಿಮಿಷಕ್ಕೆ ಮೀನ ಲಗ್ನದಲ್ಲಿ ಜನ್ಮವೆತ್ತಿದ ಕಾಂಗ್ರೆಸ್ ಮಹಾರಾಜನು ಕಿ. ಶ. ೧೯೪೭ ನೇ ಇಸ್ವಿ ಅಗಸ್ಟ್ ೧೫ ನೇ ತಾರೀಖಿನ ರಾತ್ರಿ ೧೨ ಘಂಟೆ ೮ ಮಿನೀಟಿಗೆ ಸಲ್ಲುವ ವೃಷಭ ಲಗ್ನದಲ್ಲಿ ಸ್ವತಂತ್ರ ಭಾರತದ ಚಕ್ರವರ್ತಿಯೆಂದು ಘೋಷಿಸಲಾಯಿತು.



| | | | |
|---|---|---|---|
| ಲಗ್ನ ೧೨ | ೧ | ೨ | ಶ ೩ |
| ಕೇ ಶು ೧೧ | ಕಾಂಗ್ರೆಸ್ ಮಹಾರಾಜನ ಜನನ ಕುಂಡಲಿ | ತಾ॥ ೨೮-೧೨-೧೮೮೫ | ೪ |
| ೧೦ | | | ರಾ ಕು ೫ |
| ರ ೯ | ಬು ೮ | ೭ | ಗು ಚಂ ೬ |

| | | | |
|---|---|---|---|
| ೧೨ | ೧ | ಲಗ್ನ ರಾ ೨ | ಶು ೩ |
| ೧೧ | ಸ್ವತಂತ್ರ ಭಾರತದ ಚಕ್ರಾದಿಪತ್ಯದ ಕುಂಡಲಿ | | ರ ಬು ಚಂ ಕುಂ ಶ ೪ |
| ೧೦ | | | ೫ |
| ೯ | ಕೇ ೮ | ಗು ೭ | ೬ |

## ಆಶೀರ್ವಾದ

ಬೊಂಬಾಯಿಯಲ್ಲಿ ಜನ್ಮವೆತ್ತಿದ ಈ ಕೂಸಿಗೆ ೭೨ ಮಂದಿ ಪ್ರತಿನಿಧಿ ಪ್ರಮುಖರು. ಇಂಡಿಯನ್ ನ್ಯಾಶನಲ್ ಕಾಂಗ್ರೆಸ್ಸೆಂಬ ಹೆಸರು ಕರೆದು ಭಾರತ ಪುತ್ರನೆ ನೀನು ಮಹಾತ್ಮಾ ಗಾಂಧಿಯವರ ಪರಿಪೋಷಣೆಯಿಂದ ದೆಹಲಿಯಲ್ಲಿ ಸ್ವತಂತ ಭಾರತದ ಚಕ್ರವರ್ತಿಯಾಗೆಂದು ಸರ್ವರೂ ಆಶೀರ್ವದಿಸಿ ಇಂಗ್ಲಂಡಿನ ನಿವೃತ್ತ ಅಧಿಕಾರಿ ಏ ಓ ಹ್ಯೂಂ ಅವರ ಮುಖಾಂತರ ಯಜಮಾನ್ ಡಬ್ಲ್ಯು. ಸಿ. ಬ್ಯಾನರ್ಜಿಯವರಿಗೆ ದತ್ತಪುತ್ರನನ್ನಾಗಿ ಸಮರ್ಪಿಸಿದರು.

## ರಾಷ್ಟ್ರೀಯ ಮುದ್ರಾ ಪ್ರಾರ್ಥನೆ

ಮೃಗೋನಭೀಮಃ ಕುಚರೋಃಗಿರಿಷ್ಟಾಃ ಪರಾವತಃಅಜಗಂತಪರಸ್ಯಾ॥
ಸೃಕಂ ಸಂಕಾಯ ಪವಿಯಿಂದ್ರ ತಿಗ್ಮಂವಿಶತ್ರೂನ್ ತಾಳಿಹವಿ
ಮೃಧೋಮುದಸ್ವ ॥

## ರಾಜಮುದ್ರಾ ಪ್ರಾರ್ಥನೆ

ಪಕ್ಷಿರಾಜ ವಾಹನಸ್ಯ ಜೀವಿದ್ಗರೀಯಸಿ ।
ಪಕ್ಷಿರಾಜ ವಾಹನಾದಿ ವರ್ಣ್ಯಮಾನ ವೈಭವಾ ।
ಕೋಕಿಲೋಕ ಚಕ್ರವರ್ತಿ ವಾಹನೇನ ಪುತ್ರಿಣೀ ।
ವಾರಣಾರಿ ಸಾರ್ವಭೌಮ ವಾಹನಾಗತಿರ್ಮಮಾ (ಉಮಾಸಹಸ್ರ)

## ಭಾರತ ಪತಾಕ ಪ್ರಾರ್ಥನೆ

ದ್ವಾದಶಾರಂ ರಹಿತಜ್ಜರಾಯುವರ್ಹವರ್ತಿ ಚಕ್ರಂಪರಿದ್ಯಾಮೃತಸ್ಯ ।
ಅಪುತ್ರಾ ಅಗ್ನೆ ಮಿಥನಾಸೋ ಆತ್ರಸಪ್ತಕತಾನಿವಿಂಶತಿಶ್ಚತಸ್ಥುಃ
ಹೀಗೆಂದು ಋಗ್ವೇದಾಶೀರ್ವಾದವು ಮತ್ತು
ರಾಕಾಪ್ರಬೋಧ ಶಶಿನೋಹೃದಯೋದಸ್ಯ ನೌಕಾವಿಪಜ್ಜಲನಿಕ್ಷೌ
ಪತತಾಜನಾನಾಂ । ವೇದಧ್ವಜಿ ಸ್ಯಲಲಿತಾಃ ತ್ರಿರುಚಿಃ ಪತಾಕ್
ಕಾಚಿನ್ಮಮಾಸ್ತುಶರಣಂ ಶಿವಮೂಲ ಟೀಕಾಃ ॥
ಭಾರತಬಂಧ ವಿಮೋಚನಾಚಾರ್ಯ
ಅಯುದ್ಧ ಇದ್ಯುದಾವೃತಂಶೂರ ಆಜತಿ ಸತ್ವಭಿಃ
ಏಷಾಮಿಂದ್ರೋಯುವಾಸಖಿ [ಹೀಗೆಂದು ಋಗ್ವೇದ ಶೃತಿಃ]

## ಅಹಿಂಸೋ ಪರಮೋಧರ್ಮ ಪ್ರಾರ್ಥನೆ

ವಂದೇ ಭಾರತ ಮಾತರಂ ಭಗವತಿ ಯುಕ್ತಾಂ ಪರಾಧೀನತಃ ।
ಸತ್ಯಂಜಾಕಿಲ ಭಾರತೀಯ। ಜನತಾ ಕಲ್ಯಾಣ ಮೇವಾತ್ಮನಃ ।
ಧ್ಯೇಯಂ ಸಾಧಯಿತುಂ ಸಮರ್ಪ್ಯ ನಿಖಿಲಂ ಸತ್ವಂಸ್ವಕೀಯಂ ಮುದಾ ।
ಸಂಪ್ರಾಪ್ತಾಭಿಮತಃ ಸಹಿಷ್ಣು ರಘುನಾಗಾಂಧೀಶ್ವರಂ ಜೀವತು

## ವಿತರಣೆ

ಹೀಗೆ ಸ್ವತಂತ್ರ ಭಾರತ ಪ್ರಶಂಸೆಯನ್ನು ಕುರಿತು ಪ್ರಾರ್ಥಿಸಿ ಇದರ ಮುಂದಿನ ಪರಿಣಾಮವನ್ನು ಹಾಗೂ ಅದರ ಹಿಂದಿನ ಪರಿಣಾಮ

ವನ್ನು ತ್ರಿಕಾಲ ಜ್ಞಾನಿಗಳಾದ ಮಹಾತ್ಮರು ಆಡಿರುವ ಕಾಲಜ್ಞಾನ ನುಡಿಗಳನ್ನು ಬಿಡಿಸಲಾಗುವದು.

ಪೂವಲ್ಲಿ ಕ್ಷೇತ್ರದ ಸಿದ್ಧನಂಜೇಶದೇವರು ಆಡಿರುವ ಈ ಪದ್ಯವನ್ನು ಓದಿರಿ.

ರವಿಯ ಮೇಲಣ ತಾರೆ | ಸವಿಸವಿದು ಪೋಗುತಿರಲ್
ಗವಿಯ ಸೇರಿದ ಗುರುವು ಬರುವಾಗ ಜನರೆಲ್ಲಾ
ಭವನ ನೀಗುವರು ನಂಜೇಶ

ಹಾಗೂ ಮತ್ತೊಂದು ಕಡೆ—

ಭಾರತೇ ಸ್ಮಿನ್ ತದಾಕಶ್ಚಿತ್
ನಾಮ್ನಾಚ ಪುರುಷೋತ್ತಮಾಃ
ತುರುಷ್ಕೇ ಸೇಖದುಲ್ಲಾ ಸೋಮಿಶ್ರೇಶಕ್ವರ್ಡನಾಮುಕಃ
ಹೂಣೇಃಫೃಟ್ವರ್ಕನಾಮಾಂಕಃ | ಪಾತಾಲೇಕೇ ಪ್ರತಾಹ್ವಹಂ |
ಮಣಿದ್ವೀಪೇಶಕದ್ವರ್ಕಃ | ಇತ್ಯೇವಂ ನಾಮಧಾರಿಣಃ |
ಆತಿಭೌತಿಕ ಶಾಸ್ತ್ರಸ್ಯ | ಅನರ್ಥಕ್ಯ ಪ್ರದರ್ಶಕಃ |
ಸರ್ವೇಪ್ಯಾತ್ಮಿಕ ಶಾಸ್ಕಸ್ಯ | ಭವಿಷ್ಯಂತಿವಿಚಕ್ಷಣಃ
ಶತಃ ಸರ್ವೇಷು ದೇಶೇಷು | ಜ್ಞಾನಜ್ಯೋತಿ ಪ್ರಕಾಶತೇ
ಏವಂ ಕ್ರಮಾಗತಾಚಾರೋ | ಸರ್ವತ್ರ ಪ್ರಚರಿಷ್ಯತಿಃ||

## ಸಿದ್ಧನಂಜೇಶ್ವರದೇವರ ಮತ್ತೊಂದು ಕಾಲಜ್ಞಾನ ಪದ್ಯ

ಭೌತಿಕ ಶಾಸ್ತ್ರಕ್ಕೆ | ಭೀತಿಹೊಂದುತ ಜನರು |
ಆತಕೊಳ್ಳುವರು ಜ್ಞಾನಕ್ಕೆ | ಜಗದೊಳಗೆ | ಅತುರದಿ
ನೋಡುವ ನಂಜೇಶ

## ಮತ್ತು

ಕಕಃ ಸರ್ವದೇಶೇಷೂ | ಜ್ಞಾನಜ್ಯೋತಿ ಪ್ರಕಾಶತೇ ||

## ಇನ್ನೊಂದು ಕಡೆ (ಮಹಾತ್ಮರ ಮರಣದ ಪರಿಣಾಮ)

ಹಳ್ಳಿ ಪಟ್ಟಣವಾಗಿ | ಡಿಳ್ಳಿಯಲಿ ಕೊಲಿಯಾಗಿ
ತಳ್ಳಿಕೋರರು ಹೆಚ್ಚುತ್ತಾ ಜಗದೊಳಗೆ ಒಳ್ಳಿತನವಿಲ್ಲ ನಂಜೇಶಾ||

### ಶ್ಲೋಕ

ಭೂಮ್ಯಾಂನಾಶಶ್ವತುಷ್ಪಾದ ಗಜಹಯವೃಷಭೈರ್ಯುದ್ಧ|
ದುರ್ಭಿಕ್ಷರೋಗೈಃ ಪೀಡ್ಯಂತೇ ಸರ್ವದೇಶಾ ಉದಧಿಪುರಗಥೆ
ದುರ್ಗದೇಶೇಷುಭಂಗಃ | ಮ್ಲೇಂಚಾಂತೋದಾನ್ಯಭಾಪೋ
ಧನಸುಖ ಮವನೀಶೇಂದ್ರ ಚಂದ್ರ ಪ್ರತಾಪಃ |
ಸರ್ವೇತ್ತೇಜಯಂತೀಕಾಲೇ ಭ್ರಮತಿಯುಗ ನಿಂದಸಿಂಹಹೇ
ಸೂರ್ಯಪುತ್ರಃ ||

### ಪದ್ಯ

ಭಾಷೆಗಳ ಭೇದದಿಂ | ದೇಶಭೇದವ ಮಾಡಿ| ಶಾಸನವೆಗೈವರೈಕ್ಯ
ದಿಂಜನರು ವಿಶ್ವಾಸದಿಂ ನೋಡು ನಂಜೇಶ ಹೀಗೆಂದು ಇನ್ನೊಂದು ಕಡೆ

### ಸಂಕಲ್ಪ

ಸ್ವಯಂ ರಾಜಾ ಸ್ವಯಂ ಮಂತ್ರಿ | ಸ್ವಯಂ ಧರ್ಮಗುರುಸ್ವಯಂ
ಪ್ರಜಾಸತ್ತಾತ್ಮಕಂ ರಾಜ್ಯಂ ! ತದಾನೀಂ ಸ್ಮಾಪ್ಯತೀದೃವಂ
ಪ್ರಜಾರಾಜಾ ಪ್ರಜಾ ಮಂತ್ರಿ | ಪ್ರಜಾ ಸರ್ವ ಗುರುಸ್ವಯಂ
ಪ್ರಜಾ ಸರ್ವೇಷು ದೇಶೇಷು | ಧರ್ಮಭಾದಂಕರಿಷ್ಯರೀ ||

ಹೀಗೆಂಬುದಾಗಿ ೭ನೆಯ ಶತಮಾನದಲ್ಲಿ ಬರೆದಿರುವ ಈ ಕಾಲಜ್ಞಾನವು ಸತ್ಯವೇ ಇದೆ.

ಭಾಷಾವಾರು ಪ್ರಾಂತಗಳ ವಿಚಾರವಾಗಿ ಪೂವಲ್ಲಿಸಿದ್ದ ನಂಜೇಶ್ವರ ದೇವರು ನುಡಿದ ಮಾತಿನಂತೆ –

### ಶ್ಲೋಕ

ಪಂಪಾ ಕ್ಷೇತ್ರೇಷು ಕರ್ನಾಟೆ ದ್ರಾವಿಡೆ ಜನ್ನಪತ್ತನೇ
ರಾಜೇಂದ್ರಾಖ್ಯೇತು ತ್ರೈಲಿಂಗೇ | ಗುರ್ಜರೇ ಆಹಮ್ಮದಾವುರೇ
ಆರ್ಯದೇಶೇತು ಪುಣ್ಯಾಖ್ಯೆ ಉಜ್ಜಯಿನ್ಯಾಂತು ಮೂಲವೇ
ಅಮೃತಾಖ್ಯೆ ಪಂಚನದ್ಯಾಂ | ಕಾಶ್ಮಿರೇ ಶ್ರೀ ಪುರೇವರೇ |
ಸೌರಾಷ್ಟ್ರೇ ಚಿತ್ಪುರೇರಮ್ಯೊಂ | ತಿಂಧೌ ಹೈದರಪತ್ತನೇ|
ವಂಗೇಕಾಲೀಪುರೇ ತತ್ರ | ಅಂಗೇ ಲಕ್ಷ್ಮಣ ಪತ್ತನೇ |
ಏವಂ ಕ್ರಮೇಣ ಸರ್ವತ್ರ ! ಭಾಷಾಭೇದೇನಶಾಸನಂ

ತತ್ರತತ್ರಕರಿಷ್ಯಂತಿ | ಭಾಷೋದ್ಧಾರ ನಿಮಿತ್ತತಃ
ಕದಾಚಿದ್ದೇಶಭಾಷಾಯಿಂ | ದೇವವಾಣ್ಯಾಂಕದಾಚತುಃ
ರಾಜ್ಯ ಭಾಷಾಂವಾಶ್ರಿತ್ಯ | ಕರಿಷ್ಯಂತೀ ಸ್ವಶಾಸನಂ |

## ಬಬಲಾದಿಯವರ ಕಾಲಜ್ಞಾನ

ಜೋಡು ಸೂರ್ಯರು ಮೂಡುತಾರಣ್ಣ | ಮೂಡುವ ಕಾಲಕೆ ಕೇಡು ಬರುವ ಸೂಚನೆ ನೋಡಣ್ಣ | ಕಾಡಯುನೆಯು ಕರೆಯ ಬರುವರು | ರೂಡಿ ತುಂಬಾ ಉರಿಯು ಏಳ್ವದು | ಓಡಿಹೋದರೆ ಜಾಗ ಸಿಗದು | ಮೂಢ ಜನರು ಹಿಂಸೆಗೈವರು ಹೀಗೆಂದು ಹೇಳಿರುವರು

## ಮಾಲಿಕಾ ಗ್ರಂಥದಲ್ಲಿ

ಮಾಲಿಕಾ ಎಂಬ ಅತಿ ಪುರಾತನ ಗ್ರಂಥವನ್ನು ಮಹಾಯೋಗಿಗಳೆಂದೆನ್ನಿಸಿಕೊಂಡ ೧ ಅಚ್ಯುತಾನಂದ ೨ ಯಶವಂತ ೩ ಶಿಶುವಂತ ೪ ಬಲರಾಮ ೫ ಜಗನ್ನಾಥರೆಂಬ ಐದು ಜನರು ಬರೆದಿರುವರು. ಈ ಮಾಲಿಕಾ ಗ್ರಂಥದಲ್ಲಿ ಗಾಂಧಿ ಎಂಬ ಹೆಸರು ಇದ್ದು ಆತನಿಂದ ಭರತಖಂಡದ ಬಂಧವಿಮೋಚನೆಯಾಗಿ ಸ್ವಲ್ಪ ದಿನಗಳಲ್ಲಿ ಕಾಲವಶವಾಗುವನೆಂದು ಬರೆದಿರುವದು.

## ಹೇರೂರು ವಿರುಪನಗೌಡರ ಕಾಲಜ್ಞಾನದ ಬುಡಬುಡಕಿ ಪದ

ದಹದಿಕ್ಕು ಹಸನ ಮಾಡ ಬಂದವನೇ
ಕುಶಲಗಾರ ಕಂಪನಿಯುವನಮ್ಮಾ
ಹೊಸ ವೇದವನ್ನು ಕೊಡುತಲೀಹನೇ
ಹುಷಾರಿಕಿರಲಿ ಮನದೊಳು ತಾಯಿ |
ಹೊಳದಾರಿ ಹೊರದಾರಿ ಸುಳುವು ಸೂಕ್ಷ್ಮದಾರಿ
ಪರಿಣಮದಲಿ ಇವಮಾಡ್ತಾನಮ್ಮಾ
ದೊರೆಗಳನೆಲ್ಲರ ಮುರಿತಾನತಂಗಿ

ಪರಮಪುರುಷನಮ್ಮವನವ್ಮಾ
ಉತ್ತರದಿಕ್ಕಿಲಿ ಸತ್ಯವಂತರು
ಮರ್ತ್ಯಕ್ಕೆ ದಾಳೀ ತರುವಾರು ತಂಗಿ
ಯತ್ತ ಹೋದರಿನ್ನು ಬಿಡದವ್ವ ಮಗಳೆ । ಮುತ್ತಿಗೆ ಹಾಕುತ
ಬರುತಾರವರು ಕೈಲಾಸೇಳೂ ಬಿದ್ದೋಯಿತೇ ತಾಯಿ ; ಭೂ ಕೈಲಾ
ಸಿಲ್ಲಾಯಿತೆ ಮಗಳೇ । ಬಾಲ ಚನ್ನಬಸವಣ್ಣಗೆ ಪಟ್ಟ । ದೇವ
ದುರ್ಗದಲಿ ಕಟ್ಟುತಾರವ್ಮಾ ॥ ಹೀಗೆಂದು ಬುಡಬುಡಕಿ ಪದದಲ್ಲಿ
ಭವಿಷ್ಯವನ್ನು ಹೇಳಿರುವರು.

## ಪದ್ಯ

ನಂದಿಯಾ ದುರ್ಗವನು ಅಂದದಲಿ ತೆಗೆದಾರು
ಅಂದದಲಿ ತೆಗೆದ ಆರನೆಯ ವರ್ಷಕ್ಕೆ ಬಂದಾನು ಶರಣ ಸರ್ವಜ್ಞ

## ಶ್ಲೋಕ

ತಗ್ಗುದಿನ್ನೆಗಳೆರಡು । ಹೆಗ್ಗುರುತು ತೋರುತ್ತಾ ತಗ್ಗಿ ಪೋಗುವದು।
ಜನರಲ್ಲಿ ಭಿನ್ನತ್ವ ಅಗ್ಗವಾಗುವದು ನಂಜೇಶ ।।

## ಶಿವಶರಣೆಯರ ಸುವಿ ಪದ

ನಂದಿಯ ದುರ್ಗವನು । ಅಂದದಲಿ ಮುತ್ತ್ಯಾರು । ಕಂದ ಚನ್ನಣ್ಣ
ಬರುವಾಗ ಸುವ್ವಿ॥ ಕಂದ ಚನ್ನಣ್ಣ ಬರುವಾಗ ಹೊಂದ್ಯಾವು
ಸಂಧಿಸಿದ ರಾಜ್ಯ ವಂದಾಗಿ ಸುವ್ವಿ॥ ಹೀಗೆಂದು ಶಿವಶರಣೆಯರು
ಕಾಲಜ್ಞಾನವನ್ನು ನುಡಿದಿರುವರು.

## ಪದ್ಯ

ಬಸವ ಪೀಠವು ಎದ್ದು । ಒಡೆದು ನಾಣ್ಯವು ಹುಟ್ಟಿ
ಬಸವನಾ ಮುದ್ರೆ ಮೆರೆದಾವು ಧರೆಯವಗೆ ವಶವಾಗದಿಹುದೆ ಸರ್ವಜ್ಞ

## ಪದ್ಯ

ಭರತಖಂಡದ ರಾಜ್ಯ । ಅರಸು ರಾಜ್ಯಕ್ಕೆ ಹೊಂದಿ
ಪರರಾಜ್ಯದಿಂದ ದೂರಾಗಿ ಕಡೆಯೊಳು ಹರುಷ ಹೊಂದುವರ ನಂಜೇಶ

ಕನ್ನಡದ ನುಡಿಯೊಮ್ಮೆ | ಕನ್ನಡಿಯ ತೆರದಿಂದ |
ಚನ್ನಾಗಿ ಬೆಳೆದು ಹೊಳೆಯುವದು ಜಗದೊಳಗೆ
ಮುನ್ನುಡಿಯು ಎಂದು ನಂಜೇಶ ||

## –ಪದ–

ಉತ್ತರ ದಿಕ್ಕಿನಿಂ | ಮುತ್ತಯ್ಯ ಬಂದಾನು | ಕಿತ್ತಾನು ಸುಂಗಿಯವಾ
ಒತ್ತಿ ಈಶಾನ್ಯದ ಗಾಳಿ ಬೀಸುವಂಥ | ಸತ್ಯದ ದಿನ ಬರುವುದೋ ಹರಳ
ಕಾಮನಾಡುವಂಥ ಶರಣರೇ ಕೇಳಿರಿ, ಕಾಮನನು ಈಡಾಡಿರಿ ಮಾ
ಕಾಮ ಬೀಳುತಿದೆ ಉತ್ತರ ಭಾಗದಿ | ಕ್ಷೇಮಬಾಟವೆಂದು ತಿಳಿಯಿರೋ
ಹರಳ ಬೆಂಕಿಯು ಹತ್ತುತಾ ಮೈ ಎಲ್ಲಾ ಬೆಂದಿನ್ನು | ಚಿಂತಿಸಿ ಮೇಲಿಂದ
ಬಿದ್ದಾನು ಮಾ | ಅಂಚಪೇಳುತಿದೆ | ಶಿವನಾಣೆ ಸಟೆಯಿಲ್ಲ | ಶಂಕರನ
ಬಳಗವು ನಲದೀಕೋ ಹರಳಾ ||

ಹುಲ್ಲೆ ಹುಲಿಗಳ ಸುಂಗಿ ಅರಿಮರಿಗಳ ಕಡಿದು | ಕಲ್ಲಿನಾ ಕಪ್ಪೆ
ಸರ್ಪವನು ನುಂಗುವದು | ಜೊಳ್ಳು ಮನುಜರಿಗೆ ತಿಳಿಯದೋ ಹರಳಾ
ಹೀಗೆಂದು ಹರಳಮುತ್ಯನು ಹಾಡಿರುವನು.

## – ಪದ –

ಪಟ್ಟವಿಲ್ಲದ ಶಿಶುವು | ಸೃಷ್ಟಿಯನು ಆಳಿತು
ಪಟ್ಟದರಸುಗಳು ಮಡಿಯಲಾ ಜಗದವನ ಪಟ್ಟ ಕಾಣಯ್ಯ
ಸರ್ವಜ್ಞ

ಹೀಗೆ ಹಿಂದೂ ಆರ್ಯ ಮನುಮುನಿಗಳ ಪ್ರಪಂಚದ ಕಾಲಜ್ಞಾನವನ್ನು ತಮ್ಮ ದೃಷ್ಟಿಗೆ ತಿಳಿದು ಬಂದುದನ್ನೂ ಹಾಗೂ ಶಾಸ್ತ್ರ ದೃಷ್ಟಿಯಲ್ಲಿ ಕಂಡುಬಂದುದನ್ನು ಸಾರಿ ಮುಂದೆ ಏಸುಕ್ರಿಸ್ತ ಮಹಾತ್ಮರು ತಿಳಿಸಿದ ಭವಿಷ್ಯ ಕಾಲಜ್ಞಾನವನ್ನು ಮುಂದುವರಿಸುತ್ತೇನೆ—



# ಯೇಸುಕ್ರಿಸ್ತರ ಕಾಲಜ್ಞಾನದಲ್ಲಿ ಕ್ರಿಸ್ತಮತದ ಮೂಲತತ್ವ ವಿಚಾರ

ದೇವರು ಬಾಯಿಕೊಟ್ಟ ಮನುಷ್ಯರು ಮಾತಾಡುತ್ತಾರೆ. ಮನುಷ್ಯರ ಮಾತುಗಳಿಗಿಂತ ದೇವರ ಮಾತುಗಳು ಶ್ರೇಷ್ಠವಾಗಿವೆ. ದೇವರು ಈಗಲೂ ತನ್ನ ಭಕ್ತರ ಸಂಗಡ ಮಾತಾಡುತ್ತಾನೆ. ಮಾತಾಡಿದ ಈ ಮಾತುಗಳನ್ನು ಪುಸ್ತಕದಲ್ಲಿ ಮನುಷ್ಯರು ಬರೆದಿದ್ದಾರೆ. ವೇದಗಳು ನಮ್ಮ ಹಿಂದೂ ಜನರಲ್ಲಿ ನಾಲ್ಕು ಉಂಟು. ೧ ಋಗ್ವೇದ ೨ ಸಾಮವೇದ ೩ ಯಜುರ್ವೇದ ೪ ಅಥರ್ವಣವೇದ ಇನ್ನೊಂದು ಐದನೇ ವೇದ ಉಂಟು. ಆ ವೇದವೇ ಕ್ರೈಸ್ತರೆಂಬುವರು ಓದುವ ಸತ್ಯ ವೇದವಾಗಿದೆ. ಅದು ಬೈಬಲ್ ಎಂಬ ಗ್ರಂಥವಾಗಿದೆ. ಹಿಂದೂ ದೇಶದವರ ವೇದಗಳು ಮತ್ತು ಅವುಗಳ ಭಾಷೆಯೂ ಸಂಸ್ಕೃತವಾಗಿದೆ. ಆದರೆ ಬೈಬಲ್ ಗ್ರಂಥವು ಹಳೇ ಮತ್ತು ಹೊಸ ಒಡಂಬಡಿಕೆಗಳೆಂಬ ಎರಡು ಭಾಗಗಳಿದ್ದು ಹಳೆ ಒಡಂಬಡಕೆಯೂ ಹಿಬ್ರೂ ಭಾಷೆಯಲ್ಲಿಯೂ ಹೊಸ ಒಡಂಬಡಿಕೆಯೂ ಗ್ರೀಕ ಭಾಷೆಯಲ್ಲಿಯೂ ಒರೆದುದ್ದಾಗಿದೆ. ಮನುಷ್ಯರಿಗೆ ಬುನಾದಿಯಿಂದ ಇದ್ದ ಭಾಷೆಯು ಯಾವುದೆಂದು ಹೇಳುವುದಾದರೆ ಹಿಬ್ರೂ ಭಾಷೆಯೆಂದು ಹೇಳಬೇಕು ಆದರೆ ಹಿಂದುಗಳು ಸಂಸ್ಕೃತವೇ ಬುನಾದಿ ಭಾಷೆಯೆಂದು ಹೇಳುತ್ತಾರೆ.

ಬೈಬಲ್ ಗ್ರಂಥದ ಪ್ರಕಾರ ಪೂರ್ವ ಕಾಲದಲ್ಲಿ ಜಲಪ್ರಳಯದಿಂದ ನಾಶವಾದ ನಂತರ ದೇವರು ಉಳಿಸಿದ ಒಂದೇ ಒಂದು ಭಕ್ತಿ ಕುಟುಂಬದಿಂದ ಲೋಕದಲ್ಲಿ ಜನರು ತುಂಬಿಕೊಂಡರು. ಆ ಒಂದು ಹಲಗದಲ್ಲಿ ಜಲಪ್ರಳಯದಿಂದ ತಪ್ಪಿಸಿಕೊಂಡವರು. ಭಕ್ತನಾದ ನೋಹನ ಮತ್ತು ಆತನ ಕುಟುಂಬ ಮೂರು ಮಂದಿ ಶೇಮ, ಕಾಮ, ಯಾಫತ ಎಂಬ ಮಕ್ಕಳು ಮತ್ತು ಅವರ ಹೆಂಡರು ಅವರಿಂದ ಲೋಕದಲ್ಲಿ ಜನರು ಹೆಚ್ಚಾಗಿ ಅವರು ದೇವರಿಗೆ ವಿರೋಧವಾಗಿ ನಿಂತು ಒಂದು ಗೋಪುರ ಕಟ್ಟಲಿಕ್ಕೆ ತೊಡಗಿದರು. ಅದರ ತುದಿ ಆಕಾಶಕ್ಕೆ ಮುಟ್ಟಬೇಕು. ಮತ್ತೆ ದೇವರು ತಿರುಗಿ ಮಳೆ ಕಳಿಸಿದರೆ ಅದರಲ್ಲಿ ಉಳಕೊಳ್ಳಬೇಕು ಎಂದರು.

ಈ ಭಾವವು ದೇವರಿಗೆ ಮೆಚ್ಚಿಗೆಯಾಗದೆ, ಆತನು ಅವರ ಭಾಷೆಯನ್ನು ತಾರುಮಾರು ಮಾಡಿದನು. ಭಾಷೆಯಲ್ಲಿ ಗಲಿಬಿಲಿ ಉಂಟಾಗಿ ಒಂದೊಂದು ಭಾಷೆಯವರು ಸಂಗಡವಾಗಿ ಯುರೋಪ ಖಂಡಕ್ಕೂ ಆಫ್ರಿಕಾಖಂಡಕ್ಕೂ ಅಮೇರಿಕಾ ಖಂಡಕ್ಕೂ ಏಷ್ಯಾಖಂಡಕ್ಕೂ ಆಸ್ಟ್ರೇಲಿಯಕ್ಕೂ ಚದರಿಹೋದ ಜನಾಂಗಗಳೇ ಈಗಿರುವ ಲೋಕದ ಜನರಾಗಿದ್ದಾರೆ. ಜಲಪ್ರಳಯದ ಸಂಗತಿಯು ನಮ್ಮ ಹಿಂದೂ ದೇಶದವರೂ ತಿಳಕೊಂಡ ಸಂಗತಿಯಾಗಿದೆ.

ಹೇಗೆಂದರೆ ಮನು ಎಂಬ ಋಷಿ ಇದ್ದನು ಅವನಿಗೆ ಶರ್ಮ ವರ್ಮ ಪರ್ಮ ಜಯಪತಿ ಎಂಬ ಮೂರು ಮಂದಿ ಮಕ್ಕಳಿದ್ದರೆಂದೂ ಹೇಳುವದರಿಂದ ಈ ಸಂಗತಿ ಲೋಕದಲ್ಲಿ ನಡೆದು ಬಂದ ಒಂದೇ ಸಂಗತಿಯಾಗಿದೆ ಎಂದು ವ್ಯಕ್ತವಾಗುತ್ತದೆ.

ಹೀಗಿರುವದರಿಂದ ಬೈಬಲ್ ಗ್ರಂಥವು ಪುರಾತನ ಗ್ರಂಥವಾಗಿದ್ದು ಈಗಿನ ಕಾಲದಲ್ಲಿ ಲಿಪಿಗಳಾದ ಯಾವ ಭಾಷೆಯಲ್ಲಾದರೂ ಮೊದಲು ಈ ಗ್ರಂಥವು ಬರೆಯಲ್ಪಟ್ಟದ್ದಾಗಿದೆ ಎಂದು ಹೇಳಬೇಕು. ಈಗ ಅಂದಾಜು ಸಾವಿರ ಭಾಷೆಯಲ್ಲಿ ಇದು ಬರೆದ ಗ್ರಂಥವಾಗಿದೆ. ಬೈಬಲ್ ಗ್ರಂಥವು ಹಿಬ್ರು ಭಾಷೆಯಲ್ಲಿ ಬರೆದ ಗ್ರಂಥವಾಗಿದೆ. ಆದರೆ ಆದನ್ನು ಆಲ್ಲೊಫೋಕ ಭಾಷೆಯಲ್ಲಿ ಅಂದರೆ (world laugnage) ದಲ್ಲಿ ಹೇಳಬೇಕಾದರೆ ಬೈಬಲ್ ಅಂದರೆ ದೇವರು ಮಾತಾಡಿದ ದೇವವಾಣಿ ಅಂದರೆ ಎಲ್ಲಾ ಜನರ ಬಾಯಿ ಬಲಕ್ಕಿಂತ ದೇವರ ಬಾಯಿ ಬಲ ದೊಡ್ಡದು. ಆತನ ಮಾತುಗಳು ಗುಡುಗು ಸಿಡಿಲಿಗಿಂತಲೂ ಅಧಿಕ ಶಕ್ತಿಯುಳ್ಳವುಗಳಾಗಿವೆ. ದೇವರ ಜನಾಂಗವಾದ ಇಸ್ರಯೇಲ್ಯರಿಗೆ ದೇವರು ಸಿನಾಯಿ ಬೆಟ್ಟದಲ್ಲಿ ಅವರಿಗೆ ದಶಾಜ್ಞೆ ಕಾಯಿದೆಗಳನ್ನು ಕೊಟ್ಟಾಗ ದೇವರು ಮಾತುಗಳನ್ನು ಕೇಳಲಿಕ್ಕಾಗದೆ ಜನರು ಅಂದದ್ದು ನಿನ್ನ ಮಾತುಗಳನ್ನು ಕೇಳಿ ನಾವು ಸಾಯುವಂತೆ ಮೋಶೆ ಎಂಬ ನಮ್ಮ ನಾಯಕನು ಅವುಗಳನ್ನು ನಮಗೆ ಹೇಳಲಿ ಅಂದರು. ಆದರಂತೆ ಅವುಗಳನ್ನು ತಿಳಿಸಿ ಕಲ್ಲಿನ ಹಲಿಗೆಗಳ ಮೇಲೆ ಬರೆದುಕೊಡಲಾಯಿತು.

ಹೊಸ ಒಡಂಬಡಿಕೆ ಸುವಾರ್ತೆಗಳಲ್ಲಿ ಯೋಹಾನನ ಸುವಾರ್ತೆ ೧:೧: ರಲ್ಲಿ ಆದಿಯಲ್ಲಿ ವಾಕ್ಯವಿತ್ತು. ಆ ವಾಕ್ಯವು ದೇವರ ಒಳಿಯಲ್ಲಿತ್ತು. ಆ ವಾಕ್ಯವು ದೇವರಾಗಿತ್ತು. ಆದರಿಂದ ಎಲ್ಲಾ ಉಂಟಾಯಿತು. ಆದಿಲ್ಲದೆ ಉಂಟಾದವುಗಳಲ್ಲಿ ಒಂದಾದರೂ ಉಂಟಾಗಲಿಲ್ಲ. ಅದರಲ್ಲಿ ಜೀವವಿತ್ತು, ಆ ಜೀವವು ಮನುಷ್ಯರ ಬೆಳಕಾಗಿತ್ತು ಎಂಬುದೇ ಈ ವಾಕ್ ಸ್ವರೂಪನೂ ನರಾವತಾರದಲ್ಲಿ ಬಂದಾಗ ದೇವರು ಈತನೇ ನನ್ನ ಪ್ರಿಯ ಮಗನು. ಈತನಲ್ಲಿ ನಾನು ಆನಂದಪಡುತ್ತೇನೆಂದೂ ಆಕಾಶವಾಣಿಯಲ್ಲಿ ಮಾತಾಡಿ ತಿಳಿಸಿದನು. ಇನ್ನೊಮ್ಮೆ ಆತನು ರೂಪಾತರವಾದಾಗ ಗತಿಸಿಹೋದ ಹಳೆ ಒಡಂಬಡಿಕೆಯ ಪ್ರವಾಚಕರಾದ ಮೋಶೆ ಮತ್ತು ಎಲಿಯ ಪ್ರವಾಚಕರು ಆತನ ಎಡಬಲದಲ್ಲಿ ಕಾಣಿಸಿಕೊಂಡಾಗ ದೇವರು ಈತನೇ ನನ್ನ ಪ್ರಿಯ ಮಗನು. ಈತನನ್ನು ಕೇಳಿರಿ ಎಂಬುದಾಗಿ ಮಾತಾಡಿ ಸಾಕ್ಷಿ ಕೊಟ್ಟಿದ್ದಾನೆ.

ಲೋಕದಲ್ಲಿ ಮನುಷ್ಯರು ಮನುಷ್ಯ ಸಾಕ್ಷಿಯ ಮೂಲಕ ಒಂದು ಸಂಗತಿಯನ್ನು ನಿರ್ಣಯಿಸಿ ಸ್ಥಾಪಿಸುತ್ತಾರೆ. ಆದರೆ ದೇವರು ಸಾಕ್ಷಿಯ ಮಾನವರಿಗೆ ಸ್ಥಾಪಿಸಿಕೊಟ್ಟ ಬಲವಾದ ಸಾಕ್ಷಿಯಾಗಿದೆ. ಯೋಹಾನ ಸಃವ ೧೬–೨೧ ದೇವರು ಲೋಕದ ಮೇಲೆ ಎಷ್ಟೋ ಪ್ರೀತಿಯನ್ನಿಟ್ಟು ತನ್ನ ಒಬ್ಬನೇ ಮಗನನ್ನು ಕೊಟ್ಟನು. ಆತನನ್ನು ನಂಬುವ ಒಬ್ಬನಾದರೂ ನಾಶವಾಗದೆ ಎಲ್ಲರೂ ನಿತ್ಯ ಜೀವನವನ್ನು ಪಡೆಯಬೇಕೆಂದು ಕೊಟ್ಟನು. ದೇವರು ತನ್ನ ಮಗನ ಮುಖಾಂತರ ಲೋಕಕ್ಕೆ ರಕ್ಷಣೆಯಾಗಬೇಕೆಂದು ಆತನನ್ನು ಕಳಿಸಿಕೊಟ್ಟನೇ ಹೊರತು ತೀರ್ಪು ಮಾಡುವುದಕ್ಕಾಗಿ ಕಳಿಸಲಿಲ್ಲ, ಆತನನ್ನು ನಂಬುವವನಿಗೆ ತೀರ್ಪಾಗುವುದಿಲ್ಲ. ಆದರೆ ನಂಬಿದವನಿಗೆ ದೇವರ ಒಬ್ಬನೇ ಮಗನನ್ನು ನಂಬದೇ ಹೋದದ್ದರಿಂದ ಆಗಲೇ ತೀರ್ಪಾಗಿ ಹೋಯಿತು, ಆ ತೀರ್ಪು ಏನೆಂದರೆ ಬೆಳಕು ಲೋಕಕ್ಕೆ ಬಂದಿದ್ದರೂ ಮನುಷ್ಯರ ಕೃತ್ಯಗಳು ಕೆಟ್ಟವುಗಳಾಗಿರುವುದರಿಂದ ಅವರು ಬೆಳಕಿಗಿಂತ ಕತ್ತಲೆಯನ್ನೇ ಹೆಚ್ಚಾಗಿ ಪ್ರೀತಿಸಿದರು. ಕೆಟ್ಟದ್ದನ್ನು ಮಾಡುವವರು ಬೆಳಕನ್ನು ಸಹಿಸುವುದಿಲ್ಲ ತಮ್ಮ ಕೃತ್ಯಗಳು, ದುಷ್ಕೃತ್ಯಗಳಾಗಿ ತೋರಿ ಬಂದಾವೆಂದು ಬೆಳಕಿಗೆ ಬರುವುದಿಲ್ಲ,

ಆದರೆ ಸತ್ಯವನ್ನನುಸರಿಸಿ ನಡೆಯುವವನು ತಾನು ದೇವರಿಂದ ನಡೆಸಿ ಕೊಂಡು ತನ್ನ ಕೃತ್ಯಗಳನ್ನು ಮಾಡಿದ್ದೇನೆಂದು ತೋರಿ ಬರುವಂತೆ ಬೆಳಕಿಗೆ ಬರುತ್ತಾನೆ. ಆದ್ದರಿಂದ ಸತ್ಯವೇದವು ಯೇಸುಕ್ರಿಸ್ತನನ್ನು ಆವರಿಸಿಕೊಂಡ ಗ್ರಂಥವಾಗಿದೆ. ದೇವರಿಗೂ, ಮನುಷ್ಯರಿಗೂ ಇದ್ದ ಸಂಬಂಧವು ಪಾಪದಿಂದ ಹರಿದು ಹೋಗಿರಲು ನಡುವೆ ಮಧ್ಯಸ್ಥಿಕೆ ಮಾಡಿ ದೇವರಿಗೂ ಲೋಕ ಮಾನವರಿಗೂ ಸಂಬಂಧ ಮಾಡಿದ ವ್ಯಕ್ತಿಯಾಗಿದ್ದಾನೆ. ನಾನು ಒಂದೇ ಸಂಕ್ಷಿಪ್ತ ಮಾತಿನಲ್ಲಿ ಹೇಳಬೇಕಾದರೆ ಪಾಪಿಯನ್ನು ಪಾಪದಿಂದಲೂ ಸೈತಾನ್ ಇಬ್ಲಿಸ್ ಕಲಿಯಿಂದಲೂ ಹಾಗೂ ಮರಣದಿಂದಲೂ ಬಿಡಿಸಿ ಕೊಂಡ ವ್ಯಕ್ತಿಯಾಗಿದ್ದಾನೆ. ಈ ನಾಮಾಕಿಂತವು ಆತನು ಜನನವಾಗುವು ದಕ್ಕಿಂತ ಮುಂಚಿತವಾಗಿ ಆತನ ತಂದೆ ತಾಯಿಗಳಿಗೆ ದೇವಗಂಧರ್ವರಿಂದ ತಿಳಿಯಪಡಿಸಿದ ನಾಮವಾಗಿದೆ.

ಯೇಸುವೆಂದರೆ ರಕ್ಷಣ್ಯ ಕರ್ತ ಕ್ರಿಸ್ತನೆಂಜರೆ ಅಭಿಷೇಕ ಹೊಂದಿ ದವನು. ಈತನು ದೇವರಿಂದ ಲೋಕಮಾನವರನ್ನು ಪಾಪದಿಂದ ಸೈತಾನ ನಿಂದ ಮರಣದಿಂದ ರಕ್ಷಿಸುವ ನಮ್ಮ ಸ್ವಾಮಿ ಗುರುವಾಗಿದ್ದಾನೆ. ಆತನು ನಿರಕ್ಷರಿಗಳಾದ ಹನ್ನೆರಡು ಮಂದಿ ಮೀನು ಹಿಡಿಯುವ ಜನರನ್ನು ಆರಿಸಿ ತಕ್ಕೊಂಡು ಪಲೆಸ್ತಿನ ದೇಶದ ಹಳ್ಳಿ ಪಟ್ಟಣಗಳನ್ನು ಸಂಚರಿಸಿ ರೋಗಿ ಗಳನ್ನೂ ಕುರುಡರನ್ನೂ ಕುಷ್ಟ ಜನರನ್ನೂ ಗುಣ ಮಾಡಿ ಸತ್ತವರನ್ನು ಎಬ್ಬಿಸಿ ತಾನು ದೇವರಿಂದ ಬಂದವನೆಂದೂ ತಿಳಿಯಪಡಿಸಿದನು.

ಮಾತ್ರವಲ್ಲ, ಅದೃಶ್ಯನೂ ದೃಶ್ಯನೂ ಆದನು. ಲೋಕಾದಿಯಿಂದ ಯಾರೂ ಎಂದೂ ನೋಡದ ದೇವರನ್ನು ತನ್ನ ಮೂಲಕ ತಿಳಿಯಪಡಿಸಿ ದನು. ಹೇಗೆಂದರೆ ನನ್ನ ನೋಡಿದವನು ತಂದೆಯನ್ನು ನೋಡಿದ್ದಾನೆ. ನನ್ನನ್ನು ನಂಬಿದವನು ತಂದೆಯನ್ನು ನೋಡಿದ್ದಾನೆ ನಾನೂ ತಂದೆಯೂ ಒಂದೇ ಎಂಬುದಾಗಿ ಶಿಷ್ಯರಿಗೆ ಹೇಳಿ ದೇವರ ನಿಜ ಸ್ವರೂಪವನ್ನು ಜಗತ್ತಿಗೆ ತೋರಿಸಿದ್ದಾನೆ. ಹೀಗಿರುವಲ್ಲಿ ಸತ್ಯವೇದದ ಹಳೆ ಒಡಂಬಡಿಕೆ ಗ್ರಂಥವು ಮಾನವರನ್ನು ಉದ್ಧಾರ ಮಾಡುವ ರಕ್ಷಕನು ಬರುತ್ತಾನೆಂದು ಎದುರು ನೋಡುತ್ತಿದ್ದ ಭಕ್ತಜನಾದಿಗಳಿಗೆ ತೋರಿಸಿಕೊಟ್ಟು ಹಳೇ ಭಾಗವಾದ

ಹೊಸ ಒಡಂಬಡಿಕೆಯಲ್ಲಿ ಆತನು ಬಂದು ನೆಲಿಸಿರುವ ಸಂಗತಿಗಳನ್ನು ಸ್ಪಷ್ಟವಾಗಿ ತಿಳಿಸಿಕೊಡುತ್ತದೆ.

ವೇದಕಾಲದಲ್ಲಿ ಯಜ್ಞಯಾಗಾದಿಗಳ ವಿಷಯಗಳು ಧಾರಾಳವಾಗಿ ಹೇಳಲ್ಪಟ್ಟವೆ ಅದರಲ್ಲಿ ಮನುಷ್ಯರು ನಿರೀಕ್ಷಿಸುತ್ತಿದ್ದ ಇನ್ನೊಂದು ಯಜ್ಞವು ಬರೆಯಲ್ಪಟ್ಟದೆ ಋಗ್ವೇದದ ಪುರುಷ ಸೂಕ್ತದಲ್ಲಿ ಇದನ್ನು ನೋಡಬಹುದು. ಪ್ರಜಾಪತಿಯು ಬಂದು ಯಜ್ಞವಾಗಬೇಕು ಎಂಬುದಾಗಿ ಈ ಸಂಗತಿಯು ನೆರವೇರದಂಥಾದ್ದು ತರುವಾಯದಲ್ಲಿ ಕಾಣುವ ವೇದಗಳಲ್ಲಿ ಕಂಡು ಬರುವದಿಲ್ಲ. ಆದ್ದರಿಂದ ಈ ಸಂಗತಿಯು ಈ ಜಗತ್ತಿನಲ್ಲಿ ನೆರವೇರದ ಗ್ರಂಥವು ಸತ್ಯವೇದದಲ್ಲಿ ಕಂಡು ಬರುವದರಿಂದ ಜಗಜ್ಜನರನ್ನು ರಕ್ಷಣೆ ಮಾಡಿದ ನಮ್ಮ ಕರ್ತನಾದ ಯೇಸುಕ್ರಿಸ್ತನ ಯಜ್ಞದಲ್ಲಿ ಆತನ ಪವಿತ್ರ ರಕ್ತದಿಂದ ಶುದ್ಧೀಕರಣ ಪಡೆದು ಯೇಸುವಿನ ಅನ್ಯೋನ್ಯತ್ವದಿಂದ ಪ್ರಾರ್ಥನೆಯಿಂದ ಆತನ ಸಂಗಡ ಜೀವಿಸಿ ಆತನಿಂದ ಸಿಕ್ಕ ನಿತ್ಯ ಜೀವವನ್ನು ಸರ್ವರೂ ಅಂದರೆ ಲೋಕಮಾನವರೆಲ್ಲ ಹೊಂದಿಕೊಳ್ಳುವರಾಗಬೇಕಾಗಿ ಈ ಚಿಕ್ಕ ಭಾಷಣ ಬರಹದಿಂದ ಎಚ್ಚರಿಸಿ ಹೇಳಿದ ವಿಷಯವಾಗಿದೆ. ಇದನ್ನು ನಿರಾಕರಿಸಿ ಅಲಕ್ಷ್ಯಭಾವದಿಂದ ನಡೆದವರ ಸ್ಥಿತಿಗತಿಯು ಮುಂದೆ ಮಹಾಭಯಂಕರವಾಗಿ ಪರಿಣಮಿಸುವುದಾಗಿದೆ ಅದೆ ಕಾರಣ ದುರ್ಮಾರ್ಗತನವನ್ನು ಬೋಧಿಸುವವರ ವಿಷಯದಲ್ಲಿ ಎಚ್ಚರಿಕೆ ತಂದುಕೊಳ್ಳುವವರಾಗುವಾ. (ಪೇತ ಸಃ ೨ ಮಃ ೧–೨೨) ಇದನ್ನು ಕರ್ತನ ಶಿಷ್ಯನಾದ ಪೇತ್ರನೆಂಬುವನು ಬರೆಯುತ್ತಾನೆ. ಹೇಗೆಂದರೆ—

ನಮ್ಮಲ್ಲಿಯೂ ಸುಳ್ಳುಬೋಧಕರಿರುವರು. ಅವರು ನಾಶಕರವಾದ ಮತಭೇದಗಳನ್ನು ಕಳ್ಳತನದಿಂದ ಹುಟ್ಟಿಸುವವರೂ ತಮ್ಮನ್ನು ಕೊಂಡುಕೊಂಡ ಒಡೆಯನನ್ನೂ ಕೂಡ ತಾವು ಅರಿಯೆವು ಎಂದು ಹೇಳುವವರೂ ಆಗಿದ್ದು ಪಕ್ಕನೇ ತಮ್ಮ ಮೇಲೆ ನಾಶನವನ್ನೂ ಬರಮಾಡಿಕೊಳ್ಳುವವರಾಗಿದ್ದಾರೆ. ಅವರ ನಿರ್ಲಜ್ಜ ಕೃತ್ಯಗಳನ್ನು ಅನೇಕರು ಅನುಸರಿಸುವದು ಅವರ ನಿಮಿತ್ಯ ಸತ್ಯ ಮಾರ್ಗಕ್ಕೆ ದೂಷಣೆ ಉಂಟಾಗುವದು. ಅವರು ದ್ರವ್ಯಾಶೆಯುಳ್ಳವರಾಗಿ ಕಲ್ಪನೆ ಮಾತುಗಳನ್ನು ಹೇಳುತ್ತಾ ನಿಮ್ಮಿಂದ ಲಾಭ

ವನ್ನು ಸಂಪಾದಿಸಬೇಕೆಂದಿರುವರು. ಲೋಕಾದಿಯಿಂದ ಅಂಥವರಿಗೆ ದಂಡನೆ ತೀರ್ಪು ತಪ್ಪದೇ ಬರುತ್ತಿರುವದು. ಅವರ ನಾಶನವು ತೂಕಡಿಸುವುದಿಲ್ಲ. ಹೇಗೆಂದರೆ ದೇವದೂತರು ಪಾಪ ಮಾಡಿದಾಗ ದೇವರು ಅವರನ್ನು ಸುಮ್ಮನೆ ಬಿಡದೆ ನರಕಕ್ಕೆ ದಬ್ಬಿ ನ್ಯಾಯ ತೀರ್ಪನ್ನು ಹೊಂದುವದಕ್ಕೆ ಇಡಲ್ಪಟ್ಟವರಾಗಿರಬೇಕೆಂದು ಕತ್ತಲೆ ಗುಂಡಿಗಳಿಗೆ ಒಪ್ಪಿಸಿದನು. ಆತನು ಭಕ್ತಿಹೀನರಾದ ಪುರಾತನರ ಲೋಕವನ್ನು ಸುಮ್ಮನೆ ಬಿಡದೆ ಅವರ ಮೇಲೆ ಜಲಪ್ರಳಯವನ್ನು ಬರಮಾಡಿದನು.

ಆದ್ದರೆ ಸುನೀತಿಯನ್ನು ಸಾರುವವನಾಗಿದ್ದ ನೋಹನನ್ನೂ ಅವನೊಂದಿಗೆ ಬೇರೆ ಏಳುಮಂದಿಯನ್ನೂ ಉಳಿಸಿದನು. ಆತನು ಸೋದೋಮ ಗೊಮೋರ ಪಟ್ಟಣಗಳನ್ನು ಸುಟ್ಟು ಬೂದಿ ಮಾಡಿ ಮುಂದೆ ಭಕ್ತಿಹೀನರಾಗಿ ಬದುಕುವವರ ಗತಿ ಇಂಥಾದ್ದೆಂದು ಸೂಚಿಸುವುದಕ್ಕಾಗಿ ಅವುಗಳಿಗೆ ನಾಶನವನ್ನು ವಿಧಿಸಿದನು. ಆದರೆ ಆ ಧರ್ಮಗಳ ನಾಚಿಗೆಗೆಟ್ಟ ನಡತೆಗೆ ವೇದನೆ ಹೊಂದಿದ್ದ ನೀತಿವಂತನಾದ ಲೋಟನನ್ನು ತಪ್ಪಿಸಿದನು. ಆ ನೀತಿವಂತನು ಅವರ ನಡುವೆ ಇದ್ದುಕೊಂಡು ಅವರ ಅನ್ಯಾಯ ಕೃತ್ಯಗಳನ್ನು ನೋಡುತ್ತಾ ಕೇಳುತ್ತಾ ಅವುಗಳ ನಿಮಿತ್ಯ ದಿನೇ ದಿನೇ ತನ್ನ ನೀತಿಯುಳ್ಳ ಆತ್ಮದಲ್ಲಿ ಬಹಳವಾಗಿ ಕರಕರೆಗೊಂಡನು. ಕರ್ತನು ಭಕ್ತರನ್ನು ಕಷ್ಟದೊಳಗಿಂದ ತಪ್ಪಿಸುವದಕ್ಕೂ ದುರ್ಮಾರ್ಗಿಗಳನ್ನು ನ್ಯಾಯ ತೀರ್ಪಿನ ದಿನದ ತನಕ ಶಿಕ್ಷಾನುಭವದಲ್ಲಿ ಇಡುವದಕ್ಕೂ ಬಲ್ಲವನಾಗಿದ್ದಾನೆ. ಮುಖ್ಯವಾಗಿ ಒಂಡುತನವನ್ನು ಆಶಿಸಿ ಶರೀರಭವಾನುಸಾರ ನಡೆದು ಪ್ರಭುತ್ವ ತಿರಸ್ಕಾರ ಮಾಡುವವರನ್ನು ಹೀಗೆ ಶಿಕ್ಷಿಸುವನು.

ಪೂರ್ವ ಕಾಲದಲ್ಲಿದ್ದ ಭೂಮ್ಯಾಕಾಶಗಳು ದೇವರ ವಾಕ್ಯದ ಮೂಲಕ ನೀರಿನಿಂದ ಉಂಟಾಗಿ ನೀರಿನಿಂದ ಆಧಾರಗೊಂಡಿರುವಲ್ಲಿ ಆ ನೀರುಗಳಿಂದಲೇ ಆ ಕಾಲದಲ್ಲಿದ್ದ ಲೋಕವು ಜಲಪ್ರಳಯದಲ್ಲಿ ನಾಶವಾಯಿತು. ಆದರೆ ಈಗಿರುವ ಭೂಮ್ಯಾಕಾಶಗಳು ಅದೇ ವಾಕ್ಯದ ಬಲದಿಂದ ಬೆಂಕಿಯ ಮೂಲಕ ನಾಶವಾಗುವದಕ್ಕೆ ಮಾಡಲ್ಪಟ್ಟವೆ. ಮತ್ತು ಭಕ್ತಿಹೀನ ಶಿಕ್ಷಾವಿಧಿಯು ನಾಶವೂ ಉಂಟಾಗುವ ದಿನಕ್ಕಾಗಿ ಆ ಬೆಂಕಿಯು ಸಿದ್ಧವಾಗಿ ನಿಂತಿದೆ.

ಎಂದೋ ಒಂದು ದಿನ ಆಕಾಶ ಮಂಡಲವು ಮಹಾಘೋಷದಿಂದ ಇಲ್ಲದೇ ಹೋಗುವದು. ಸೂರ್ಯ ಚಂದ್ರ ನಕ್ಷತ್ರಗಳು ಉರಿದು ಲಯ ವಾಗಿ ಹೋಗುವವು. ಭೂಮಿಯು ಆದರಲ್ಲಿರುವ ಕೆಲಸಗಳೂ ಸುಟ್ಟು ಹೋಗುವವು ಇದನ್ನೇ ಕ್ರಿಶ್ಚಿಯನ್ ಕಾಲಜ್ಞಾನಿಗಳು ತಮ್ಮ ಉತ್ತರವನ್ನು ಬಿತ್ತರಿಸಿದ್ದಾರೆ.

## ಶ್ರೀ ಮೇಡಂ ಬ್ಲಾವಟೆಸ್ಕಿಯವರ ಕಾಲಜ್ಞಾನ

ಸಿಕ್ರೇಟ್ ಡಾಕ್ಟರಿನ್ ಎಂಬ ಇಂಗ್ಲೀಷ ಗ್ರಂಥದ ವ್ಹಾಲ್ಯುಂ ನಂ. ಪೇಜ ನಂ. ೮೦೫ ರಲ್ಲಿ ಏಕಮೇವ ಪ್ರಜಾರಾಜ್ಯವೆಂದು ಬರೆದಿರುವರು. ಜಪಾನ ದೇಶದ ರಾಜ್ಯಾಂಗವೇತ್ತನಾದ ಕೌಂಟ ಒಕುಮ ಮತ್ತು ಎಸ್ ಝುಥರ್ ಪೋರ್ಡು ಎಂಬುವರು ನುಡಿದ ಕಾಲಜ್ಞಾನವು ಸಹ ಭವಿಷ್ಯ ಪಥದಲ್ಲಿದೆ.

## ಬ್ರಹ್ಮವಿದ್ಯಾದರ್ಪಣ ಕಾಲಜ್ಞಾನವು

ಐದು ಸಾವಿರ ವರ್ಷಗಳು ಗತಿಸಿದ ಮೇಲೆ ಐದು ಮತ್ತು ಆರು ಸಾವಿರ ಮಧ್ಯ ಭಾಗದಲ್ಲಿ ಜಗತ್ತಿನ ಮಾನವಕೋಟಿ ಒಂದೇ ಒಂದಾಗ ಬೇಕು. ಒಂದೇ ಕುಲ ಉಳಿಯಬೇಕು, ಒಂದೇ ರಾಜ್ಯಾಡಳಿತ ನಡೆಯಬೇಕು. ಭಾರತೀಯ ಮಹಾವೀರ ಪುರುಷನಿಂದಲೇ ಎಂದು ಡಾಕ್ಟರ ಅನಿಬೆಸೆಂಟಮ್ ನವರು ಕಾಲಜ್ಞಾನವನ್ನು ಹೇಳಿರುವರು.

## ಯೇಸುವಿನ ಅವತಾರ

ಕ್ರೈಸ್ತಮತ ಪ್ರಶಕ್ತನಾದ ದಾನಿಯಲ್ ಹೇಳಿದ ಪ್ರಕಾರ ಈಗ ತಾನೆ ಪ್ರಕಟವಾಗಹತ್ತಿದೆ.

## ಕ್ರೈಸ್ತ ಧರ್ಮ ಸಂಸ್ಥಾಪಕನ ಕಾಲಜ್ಞಾನವು

ಕ್ರೈಸ್ತನು ಏಶಿಯಖಂಡದಲ್ಲಿ ಜನ್ಮವೆತ್ತಿ ಯುರೋಪ ಅಮೇರಿಕೆ ಗಳಲ್ಲಿ ಪಸರಿಸಿದ ಕ್ರೈಸ್ತ ಧರ್ಮ ಸಂಸ್ಥಾಪಕನು. ಬೈಬಲ್ಲಿನಲ್ಲಿ ಹೀಗೆ ಬರೆ ದಿರುವರು. ಯಾರು ಖಡ್ಗ ಹಿಡಿಯುವರೋ ಅವರು ಅದೇ ಖಡ್ಗದಿಂದ ಸಾಯುವರು, ಖಡ್ಗದ ಕಾಲ ಹಿಂದಾಗುವದು. ಒಂದೇ ಒಂದಾದ ರಾಜ್ಯಾ ಡಳಿತ ನಡೆಯುವದು.

# ಕ್ರಿಶ್ಚಿಯನ್ ಕಾಲಜ್ಞಾನ ಪದಗಳು

## ರಾಗ ಹಿಂದುಸ್ತಾನಿ ಗಜಲ್ ಏಕತಾಳ

ಬರುತಾನೆ ಪ್ರಭು ಸರುವವಿಭು ಧರಣಿಯೊಳಗೆ ||ಪ||
ಇರುವನರರು ಕರವ ಮುಗಿದು ಎರುಗಿರಾತಗೆ ನೀವು ||ಬರು||
(ಮತ್ತಾಯ ಸಃ ೨೪ ವಃ ೩೧) ||೧||

ತಪ್ಪಿಸಕೊಡದಪ್ಪನವರು ನೆಪ್ಪ ಮಾಡೆಲೋ ।
ಸೊಪ್ಪಿಯಂತೆ ಸುಟ್ಟುಹೋಗಿ ಗಪ್ಪು ಆಗೋರು ಅಪ್ಪ ||ಬರು||
(ಮತ್ತಾ ಸ: ೨೪ ವ: ೩೭-೩೯) ||೨||

ಮೋಟಿಯನ್ನಿಟ್ಟು ದಿಟ್ಟಪ್ರಭು ತೂರುವನೆಲೋ ।
ಕೆಟ್ಟ ಜನರ ಹೊಟ್ಟನಂತೆ ಸುಟ್ಟು ಬಿಡುವನು- ದೇವ ||ಬರು
(ಮತ್ತಾ ಸ: ೩ ವ:೧೩) ||೩||

ಹುಚ್ಚುಗುಣದಿ ತುಚ್ಚರಾಗಿ ಮೆಚ್ಚಿದರೆಲೋ ।
ಕಚ್ಚುವಂಥ ಕಿಚ್ಚಿನೊಳಗೆ ಮುಚ್ಚಿ ಬಿಡುವೆನು- ನಿಮ್ಮ ||ಬರು||
(ಮತ್ತಾ ಸ: ೨೫ ವ: ೪೧) ||೪||

ಜಾಗರಾಗಿ ವೇಗದಿಂದ ಸಾಗಿ ಬನ್ನಿರಿ ।
ಭೋಗಭಾಗ್ಯವೆಲ್ಲ ಮರೆತು ಜಾಗ ಹುಡುಕಿರಿ ಮುಕ್ತಿ ಬರು||
(ಮತ್ತಾಯ ಸು: ೨೪ ವ: ೪೨-೧) ||೫||

ರಕ್ಷಕ ಯೇಸು ದೀಕ್ಷೆ ಹೊಂದಿ ಮೋಕ್ಷ ಪಡೆಯಿರಿ।
ರಕ್ಷಕೊಟ್ಟು ದೀಕ್ಷೆಗೊಬ್ಬ ಸಾಕ್ಷಿ ಹೇಳುವೆ ನಾನು ||ಬರು||
(ಅಪೋಸ್ತ ಸ: ೧೬ ವ: ೩೦-೩೧೨) ||೬||

## ರಾಗ ಪದ (ಎಚ್ಚರಿಕೆ)

ನಾಶನ ದಿನವೋ ಬರುವದೋ ನಿನಿವೋ
ತ್ವರಿತಾದಿ ನೀವಿನ್ನೂ ತಪ್ಪಿಸಿಕೊಳ್ಳೋ
ಮಾನಸಾಂತವರ ಪಡೆದಂಥ ಜನರು
ದಿಕ್ಕು ಕಾಣದ್ದಾಂಗಾಗಿ ತೊಳಲಿ ಬಳಲುವರು ||ನಾ||ಪ||ಅನು

ತೀರ್ಪಾಗೋದಿನವೋ ಇರುವದು ನಿಜವೋ |
ಸರ್ಪದ ಗುಣಬಿಟ್ಟು ತಪ್ಪಿಸಿಕೊಳ್ಳೊ |
ಮಾರ್ಪಾಟವಾಗೋ ದರ್ಪದಿ ನೋಡೋ
ಬರ್ಫಿನ ಬಿಳಿಯಂತೆ ನಿರ್ಮಲನಾಗೋ | ನಾಶ ||೧||
ಪಾಪವನಳಿಯೋ ಗುರುಪಾದ ಪಿಡಿಯೋ |
ಶಾಪದ ತಾಪಾವನೀಗೀಸಿಕೊಳ್ಳೋ |
ದೀಪಕ್ಕೆ ಓಟಕೀಟದ ಆಟ
ಈ ಪರಿ ಕಾಟವು ಮಾಟದಂತಿಹುದೋ ||ನಾಶ|| ೨||
ನಾಶನ ಧಿನವೋ ಸಮೀಪವಿದೆಯೋ
ಯೇಸು ಪಾದವನಂಬಿ ತಪ್ಪಿಸಿಕೊಳ್ಳೋ
ಮೋಸದ ಮಾರ್ಗವನಾ ಸರಿಸದೆ ನೀ
ಪಾಸುಹೊಂದಿಕೋ ಬೇಗ ಭಾಷೆ ಪಾಲಿಪೆನಾ ||ನಾ|| ||೩||

## ಕರ್ತನ ದಿನಕೆ ಎಚ್ಚರ

### ರಾಗ ಪದ

ನರರ ಕರ್ಮಕೆ ತಕ್ಕ ದಿನ ಬಂತು ಮನುಜ |
ರಾಜಾಧಿರಾಜನು ಮೇಘದಿ ಬರುವನು ತಿಳಕೊಳ್ಳೋ ಮನುಜ ||ಪ||
ಪಾಪವಿಚಾರದ ದಿನ ಬಂತು ಮನುಜ
ಕೋಪಾದಿಕರ್ತನು ತೀರ್ಪನು ಕೊಡುವನು ತಿಳಕೊಳ್ಳೊ ಮನುಜ
ಹುಚ್ಚನಾಗದೆ ಬೇಗ ನೆಚ್ಚರ ಮನುಜ |
ಉಚ್ಚ ಪದವಿ ನಿನ್ನ ಮೆಚ್ಚುತ ಕೊಡೋ
ಗುರುನೆಚ್ಚಿಕೊ ಮನುಜ ||ನರರ||೨||
ಎಚ್ಚರವೆಚ್ಚರ ಎಚ್ಚರ ಮನುಜ |
ದೇವರ ವಾಕ್ಯವ ಓದಿಕೋ ಬೇಗನೆ ನೆಚ್ಚದ ಮನುಜ ||ನರರ ೩||
ಹಂಬಲಿಸದೆ ಗುರು ನಂಬಿಕೋ ಮನುಜ
ನಂಬಿದರೆ ನಿನಗಿಂಬು ಸಿಕ್ಕದು ಸ್ವಾಮಿ ಅಂಬರದೊಳಗೇ ||ನರರ||೪||

# ನ್ಯಾಯ ತೀರ್ಪು

## ರಾಗ ಕಮಾಸ ಆಟತಾಳ

ಇನ್ನ ನೋಡಿರೋ | ಲೋಕದಾಟವ ನಿನ್ನ ಕಣ್ಣ ತುಂಬಲಿ
ಇನ್ನ ನೋಡಿರೋ ಲೋಕದಾಟವ ||ಪ||
ಸಣ್ಣನಾಯದಣ್ಣ ಬಂದು ಬಣ್ಣ ಬಡಿವಾರ ತೆಗೆದು ಹಾಕಿ|
ನುಣ್ಣಗೆ ಎಲ್ಲವನು ಆಳುವ ಸುಣ್ಣದಂತೆ ಕುದಿಯುತ್ತಿರುವಿರಿ |ಇನ್ನ|ಅ
ಹೀನಮಾನವತಾನು ಅಲ್ಲಾ | ಜ್ಞಾನಿಯರು ತಿಳಿಯಿರಿ |
ಹೀನಮಾನವನಾತನು ಅಲ್ಲಾ |
ದಾನಶೂರನಾಗಿ ಬಂದು ದೀನ ಜನರ ರಕ್ಷಿಸುವನು |
ಕಾನನ ದೇಶದಲಿ ಆತನು ಮಾನಿನಿ ಒಡಲಲ್ಲಿ
ಪುಟ್ಟಿದ ||ಇನ್ನ||೧||

ಅರಿವಿನಿಂದ ಆತನನು ಹಿಡಿರಿ | ಸುರವರು ಬಿಡದಲಿ |
ಅರುವಿನಿಂದ ಆತನನು ಹಿಡಿರಿ |
ಕರಗಳನ್ನು ಜೋಡಿಸುತ್ತ ಶರಗಳನ್ನು ಬಾಗಿಸುತ್ತ |
ಪರಮ ಗುರುವು ಯೇಸುನಾಥನ ಪುರಿಯ ಹೊಕ್ಕು
ಶರಣಾಗಿರಿ ||ಇನ್ನು||೨||

ಧಾರುಣಿಯ ತೀರ್ಪಿಗೆ ಬರುವವನು |
ಮಾರಿಮರ್ದನನಾಗಿ ಅಂದು ಗೋರಿ ಹಾರಿದ ಧೀರ ಬಂದು |
ಕೇರಿಕೇರಿಗೆ ಸಾರಿರೆಂದು ಏರಿ ಅಂಬರ ಕೂತನಾಥನು ||ಇನ್ನು||೩||

ಸತ್ಯದಿಂದ ಪ್ರಭುವು ಬರುವನು ಮರ್ತ್ಯರು ತಿಳಿಯಿರಿ |
ಸತ್ಯದಿಂದ ಪ್ರಭುವು ಬರುವನು |
ಸುತ್ತದೂತರ ಕರೆದುಕೊಂಡು ಹೊತ್ತುತು ತೂರಿ ಊದಿಸುವನು |
ಸತ್ತ ಜನರು ಎದ್ದು ಬರಲು ಮತ್ತೆ ನ್ಯಾಯ
ತೀರಿಸುವನು |ಇನ್ನು|೪|

ಏಸುಕ್ರಿಸ್ತನೆ ಶಿಷ್ಯರಾಗಿರಿ ಈಶನು ಆತನು|
ಏಸುಕ್ರಿಸ್ತನ ಶಿಷ್ಯರಾಗಿರಿ |
ದೇಶದೊಳಗೆ ವಾಕ್ಯವನ್ನು ಬೇಸಿ ಹಾಡಿ ತಿಳಿಸುವವನು
ವಾಸ ದಕ್ಷಿಣಮ್ಹಾರಾಷ್ಟ್ರದಿ ದಾಸ ಯೋಸೆಪು
ಕವಿಯು ಇರುವನು ॥೩॥

## ಜಲಪ್ರಳಯದ ಚರಿತ್ರೆ

### ರಾಗ ಲಾವಣಿ ಏಕತಾಳ

ಪೂರ್ವ ಕಾಲದಲ್ಲಿ ಸರ್ವಮನುಜರು ಸರ್ವೇಶನ ಭಕ್ತಿ ಬಿಟ್ಟಿಹರು |
ಗರ್ವ ಹಾಂಕಾರ ಪರ್ವತಕ್ಕೇರಿ | ಸರ್ವಜನರು ಮುಂದೆ ಕೆಡುತಿಹರು ॥ಪ॥
ಸೂರ್ಯಚಂದ್ರ ನಕ್ಷತ್ರಕ್ಕೆ ಎರಗಿ | ಕಾರ್ಯ ನಡಿಸಬೇಡುವರಾಗಿ ||
ಆರ್ಯ ಜನರ ಪರಿಮೂರುತಿಗೆರಗಿ | ಶೌರ್ಯ ಕಳೆದುಕೊಂಡವರಾಗಿ ॥೧॥

ಉಂಡು ಉಟ್ಟು ತೊಟ್ಟದ್ದೇ ಬಂತು ಎಂದು ಪುಂಡರಾಗಿ ತಿರುಗಿದರೆಂದು|
ಮಂಡಲಪತಿಯು ಖಂಡಿತ ಬಂದು | ಕಂಡನು ಸುರವರ ಮನದಂದು ॥೨॥

ಮೋಹನನೆಂಬ ಮನುಋಷಿ ಭಕ್ತಿಲಿ | ಇಹದಿ ಇದ್ದನು ಪೂರ್ವದಲಿ |
ಮೋಹದ ಮೂವರು ಮಕ್ಕಳು ಸೊಸಿಗಳು ಯೆಹೋವನ
ಭಕ್ತಿ ಮಾಡುತಲಿ ॥೩॥
ದಯವಿನ್ನು ದೊರಕಿತು ಮೋಹನ ಋಷಿಗೆ | ನಯದಿ ನಡೆದನವದೇವರಿಗೆ |
ಜಯವು ನಿನಗೆ ಪ್ರಳಯವು ಜನರಿಗೆ |ಭಯವ ಸಾರ ಬೇಕವರಿಗೆ ||೪||
ಹಡಗವ ಕಟ್ಟಿಲೋ ಕೋಣೆಗಳಾಗಿ | ನಡೆಯುವ ಭೂಮಿ ಸೀಮ್ಯಾಗ|
ತಡವನು ಮಾಡದೆ ಬಡ ಪಶುಪ್ರಾಣಿಗಳಿಡಬೇಕು ಜೋಳಜೋಡೊಳಗೆ ||೫||
ನೂರ ಇಪ್ಪತ್ತು ವರುಷ ಮುದ್ದತ್ತು | ಸಾರಬೇಕು ಜನರಿಗೆ ಮತ್ತು |
ಭಾರಿ ಮಳೆಯಿಂ ಪ್ರಳಯದ ಕುತ್ತು | ಮೀರಿ ಮುಳುಗುವದು ಜಗತ್ತು ||೬||
ದೇವರ ಶಿಕ್ಷೆಯು ಬರುವದು ಎಂದು | ಮೋಹನಋಷಿ ತಿಳಿಸಿದನಂದು|
ಭಾವಭಕ್ತಿಯಿಂ ಮನದಲಿ ನೊಂದು | ನೀವು ಬದುಕಿಕೊಳ್ಳಿರಿ ಬಂದು ||೭|

ದೇಶದೊಳಗಿನ ಜನರೆಲ್ಲರು ಕೂಡಿ | ಹಾಸ್ಯಮಾಡಿದರೋ ನಗಾಡಿ
ಈಶನು ನೋಡಿ ರೋಷವ ಮಾಡಿ | ನಾಶ ಮಾಡಿದನು ತ್ವರೆ ಮಾಡಿ ||೮||

ಮುದ್ದತು ಮೀರಿತು ಬುದ್ಧಿಯು ಹೋಯಿತು ಬಿದ್ದು ಮುಳುಗಿ
ಹೋಗೋದು ಬಂತು ||೯||

ಮೇಘ ಮಂಡಲವು ಘರ್ಜನೆ ಮಾಡಿ | ಮೇಘಕ್ಕೆ ಮೇಘವು ತಾ ಕೂಡಿ
ವೇಗದಿ ಸಿಡ್ಲು ಗುಡುಗು ಮಿಂಚು ನೋಡು ಭೋಗಿಗಳಿಗೆ ಬಂದಿತು
ಕೇಡು ||೧೦||

ಜಲಪ್ರಳಯದ ಕಲಿಯು ಹೇಳುವೆನಾ | ಮಳೆಯು ಬಂತು ನಾಲ್ವತ್ತು ದಿನ|
ನೆಲದ ಮೇಲಿನ ಎಲ್ಲವು ಪ್ರಾಣ | ಉಳಿಯದಲಳಿದವು ಬಂಧನ ||೧೧||

ಕೆರೆ ಭಾವಿಗಳು ತುಂಬಿ ಒಡೆದವಣ | ಹರಿದಾವು ಹಳ್ಳಹೊಳೆಗಳಿನ್ನಾ |
ಭರದಿ ಎತ್ತಿಕೊಂಡು ಕರದಿ ಮಕ್ಕಳನ್ನಾ | ನೆರೆದು ಕೂಡಿದರೋ
ಜನರಿನ್ನಾ ||೧೨||

ಧಪ್ಪ ದುಪ್ಪ ಧಡಧಡವೆಂಬ ಶಬ್ದವು| ತಪ್ಪದೆ ಊರೊಳಗಿದ್ದವು
ಅಪ್ಪ ಅವ್ವ ಎಂಬ ಗೋಳುಗಳಿದ್ದವು |ಉಪ್ಪರಿಗೆಗಳೆಲ್ಲಾ ಬಿದ್ದವು ||೧೩||

ಜಲವು ಹೆಚ್ಚಲಿನ್ನು ಮೋಹನ ಹಡಗವು | ನೆಲವು ಬಿಟ್ಟು ತೇಲಲುಜಯವು
ಕಲೆಲೆಲೆಲೆಲೆ ಒದರುವ ಶಬ್ದವು | ಬಲವಾಗಿ ಜಲದೊಳು
ಕೇಳಿದವು ||೧೪||

ಗುಡ್ಡಗಂಹರಾ ಗಿಡಮರವೇರಿ | ದಡ್ಡರು ಕೂತಾರು ಹೌಹಾರಿ|
ದೊಡ್ಡ ಮಳೆಯು ತಾ ಗುಡ್ಡಕ್ಕೆ ಏರಿ | ಮಡ್ಡರ ಸೆಳದಿತು
ಬಲು ಬಲಭಾರಿ ||೧೫||

ಅಷ್ಟರೊಳಗೆ ಗಿಡಮರಗಳು ಎಲ್ಲವು | ನಷ್ಟವಾಗಿ ಬಿದ್ದು ಹೋದುವು |
ಸೃಷ್ಟಿಯೊಳಗೆ ದೊಡ್ಡ ಗುಡ್ಡಬೆಟ್ಟವು | ಎಷ್ಟೋ ಮುಳುಗಿ
ನೀರು ನಿಂತವು ||೧೬||

ಸಡಗರದಿಂದ ಹಡಗವು ತೇಲಲು | ಕಡುಪಾಪಿಗಳೆಲ್ಲರಳಿಯಲು
ಒಡೆಯನು ಹಡಗದಿ ಬಡವರ ನೋಡಲು | ಬಿಡದಲಿ ನೀರೆಲ್ಲ
ಒಣಗಿಸಲು |೧೭|

ಹಡಗದಿ ಮೋಹನಋಷಿ ಪುತ್ರರೆಲ್ಲರು | ಒಡಗೂಡಿ ಹೊರಗಿನ್ನು ಬಂದರು
ಪೊಡಲು ಗಧಿಸನನ್ನಾಚರಿಸಿದರು| ನಡೆನುಡಿ ಒಡಗೂಡಿ ನಡೆದರು |೧೮|
ಲೋಕಪ್ರಳಯವತಿ ಭೀಕರದಿಂದ | ನಾಕು ದಿಕ್ಕಿಸಿಂದ ಬರುತ್ತಿಹರು
ತಾಗದೆ ಬಾಗದು ಹಿಂಗದು ಇರುವದು | ಜಾಗರರಾಗಿ ನಡೆಯಿರಿ ತಿಳಿದು |೧೯|
ಪಾಪ ಸಮುದ್ರದಿ ಬಿದ್ದು ಮುಳುಗುತಿದಿ| ಲೋಪವಾಗಿ ಉಳಿಯದೆಹೋದಿ
ಭೂಪಯೇಸುವಿನ ರಕ್ಷಣೆ ಹಡಗದಿ | ಮಾಫಿಪಡೆದು ಉಳಿಯಲು ಜಗದಿ|೨೦|

## ರಾಗ ತತ್ವ ಏಕತಾಳ

ಏಸುಕ್ರಿಸ್ತನ ವಾಕ್ಯ ಲೋಕಕ್ಕೆ ಬಂದೈತೆ |
ಬೇಸಾಗಿ ಇರಬೇಕು ಹೊಡಿ ಡಂಗುರಾ ಹೊಡಿ ಡಂಗುರಾ|
ಮೋಸಾಲು ಮುರಿದಾವು ಹೇಸಿತನವಳಿದಾವು |
ಸೋಸಿದಂತಿರಬೇಕು ಹೊಡಿ ಡಂಗುರಾ ಹೊಡಿ ಡಂಗುರಾ ||
ಸತ್ಯವ ಬಿಟ್ಟವರೇ ಲತ್ತಿಯ ಬರುತಾವೆ |
ಹತ್ಯಾಗಿ ಇರಬೇಕು ಹೊಡಿ ಡಂಗುರಾ ಹೊಡಿ ಡಂಗುರಾ |

೦೦೦

## ಬ್ರಹ್ಮತೀರ್ಥಾಶ್ರಮ ನಿವಾಸಿಗಳಾದ ಲಿಂಗೈಕ್ಯ ಸಾದು ಬಸಜ್ಜನವರು ಹಾಡಿದ ಕಾಲಜ್ಞಾನ ಪದ ರಾಗ ತ್ರಿಪುಟಿತಾಳ

ಸಾಗುತಿದೇ ದಿವಸ ಸಾಗುತೀದಲ್ಲಾ | ತೂಗಿ ಜಗವನು ಸಾಗಿ
ಮುಂದಕ್ಕೆ ನೀ ದಿನಗಳ ಕಳೆಯುತಾ ||ಪ |
ಸತ್ಯ ಕೃತತ್ರೇತಾದಿ ದ್ವಾಪರ | ಮತ್ತೆ ಕಲಿಯುಗ ಕಳೆದು ಹೋಗುತ್ತ |
ನಿತ್ಯ ಸುಖವನು ಜನ್ಮಕ್ಕೆ ಸುತ್ತಿ ಸುತ್ತಿ ಕೊಡುತ್ತ ಬೇಗ |೧|

ಆರ್ಯ ಜೈನ ಬೌದ್ಧ ಮತಗಳು | ಸೂರೆಗೊಳ್ಳುತ ಐದು ಸಾವಿರ |
ವರುಷ ಕಳೆದು ಸತ್ಯಕೃತವನು | ಸಾರಿ ತಂದಿತು ಜಗಕೆ ಮುಂದೆ ||೨||
ಮಾರಿ ಮಸಣಿಯು ದುರ್ಗಿಚೌಡಿಯು | ತೋರಿ ಧರೆಗೇ ಜನರ ಸೆಳೆದು |
ಹರಿಯು ಗಾಂಧಿಯಾಗಿ ಜನಿಸಿ | ಕುರುಹು ಜಗಕೆ ಕಾಣಿರಯ್ಯಾ ||೩||
ಹತ್ತು ಮತ್ತೊಂದಾವತಾರವು | ಸತ್ಯವಾಗಿ ತೋರುತ್ತಿರುವದು|
ಹತ್ತಿ ನೂಲು ತೆಗೆವನೆಹರುದೇವ ಇಂದ್ರನಾಗಿ ಜಗತೆ ||೪||
ಜಿನ್ನ ಬಾಬುಗಪುರಬೋಸ |ಇನ್ನು ವಿಠಲವಲ್ಲಬಾಯಿ | ಚನ್ನ
ಮಾಳವಿ ಸಪ್ತಋಶಿಗಳು | ಜನಿಸಿ ಲೋಕದಿ ಕಾಣುತ್ತಿಹರು ||೫||
ಹರಿಯುಮತಕ್ಕೆ ನೆರೆದು ನಿಂತರು | ತರುಣ ಸೇವಕ ದೇವಗಣಗಳು |
ಧರಣಿದೇವಿ ಕುಮಾರರೆಂದು | ಹರಸಿ ಭಾರತದೇವಿಗೆರಗಿ ||೬||
ಏಕವಿಂಶತಿರೂಪದೋರಿ | ಕಾಕು ಕಲಿಯ ನಾಶಮಾಡಿ | ಏಕಕಾಲದಿ
ಜಗವ ಸೃಷ್ಟಿಸಿ | ಸಾಕೆ ಸಲುಹುವ ಹರಿಯು ತಾನು ||೭||
ದ್ವಾದಶಾವತಾರದೊಳು | ಗೂಗೆಪೂಜೆಯಾದಿಕಯ್ಯ | ಸಾದು
ಕಾಗಿಯಾಗಿ ಬಂದು | ಸೋಗು ಮಾಡಿ ಜಗವನಳಿದ ||೮||
ತ್ರಿದಶಾವತಾರದೊಳು | ನದಿಯ ಜಲವು ಶೋಷಿ ಮುಂದಕ್ಕೆ |
ಶುದ್ಧ ಚಿನ್ನ ತೀರ್ಥ ಹರಿದು ಜಗಕ್ಕೆ ಸುಖವು ಕಾಣಿರಯ್ಯ ||೯
ಹರಿಯ ಹದಿನಾಲ್ಕಾವತಾರದಿ | ಸಸಸಿಜೋದ್ಭವ ಸೃಷ್ಟಿಯೆನಿಸಿ |
ಕಿರಿಯ ಕುಲವು ಜಗದೆ ಬೆಳೆದು | ಹಿರಿಯತನವ ಮಾಡಿತಯ್ಯ ||೧೦||
ಮಾದವದನ್ನೈವತಾರದೆ | ಓದು ಹೊಸದು ಹೊಲೆಯ ದೊರೆಯು
ಆದಿ ಭೇದವುನಳಿದು ಜಗವು | ಸಾದುವಾದತಯ್ಯ ಮುಂದೆ ||೧೧||
ಷೋಡಶಾವತಾರದಲ್ಲಿ | ಕಡಲ ನಡುವೆಗಂಗೆಯುದಸಿ |
ನಡೆದು ಬಂದು ಗಿರಿಯ ಸೇರಿ | ಮೃಡನಮಡದಿಯೆನಿಸಳಯ್ಯ ||೧೨||
ಹರಿಯ ಹದಿನೇಳಾವತಾರದ | ಶಿರಿಯು ಬದಲು ಜಿಗದೊಳಾಗಿ |
ನರಿಯು ರಾಜ್ಯಪಟ್ಟವಾಳಿಗಿರಿಯು ಧರೆಗೆವರಿಗಿತಯ್ಯಾ ||೧೩||
ಕೇಶವದನೆಂಟಾವತಾರದ | ಕುಶಲ ನಾರೀ ಜನರ ಪಟ್ಟವು |
ವಶಪುಸುರರು ನರರಗಿನ್ನು | ಆಶನ ಅಧಿಕ ಜಗದೋಳಾಗ ||೧೪||
ಹತ್ತುಒಂಭತ್ತಾವತಾರಧಿ | ಕತ್ತಿ ಶಂಕರನಾಗೆ ಕಲಿಯೊಳು |
ಮುತ್ತು ಸುರಿದವು ಕತ್ತಲೊಳಗೆ। ಸತ್ಯವಾಕ್ಯ ತಪ್ಪದೆಂದೂ ||೧೫||

ವಿಂಶತ್ತ್ಯಾವತಾರದೊಳಗೆ | ಹಂಸಪಕ್ಷಿ ರಾಜ್ಯವಾಗೆ |
ವಂಶಪಾವನ ಎರಡು ಕತಿಗಳು | ಸಂಶಯವಿಲ್ಲ ಜಗಕೆ ಮುಂದೆ ||೧೬||
ಏಕವಿಂಶತ್ತ್ಯಾವತಾರಧಿ | ಸಾಕು ಮಾಡಿ ಕಲಿಗೆ ಮಂಗಲ |
ವೈಕುಂಠನಾಥನು ಮಾಡಿ ಪೋಗುವ| ಮುಕುತಿಮಂಗಲನುನುಜನ್ಮಕೆ ೧೭||
ಮೆರೆವದ್ಯಾಯವನಹಳ್ಳಿಪುರವರ | ಉರಗದರತಾ ಬ್ರಹ್ಮಲಿಂಗನ
ಚರಣ ಸ್ಮರಿಸುತ | ಪೇಳ್ದ ಬಸವನು ಕಲಿಮರ್ಮವನೂ ||೧೮||

## ರಾಗ ಝಂಪೆತಾಳ

ಕಲಿಯುಗದ ಧರ್ಮವು ಮುಗೆದು ಬಂತೀಗ |
ನಲಿದು ಮಾಡುವ ಕಾರ್ಯ ಮುಂದೇನು ಕಲಿಯೇ ||ಪ

ಮೊದಲು ಮಾನವಗಾಡಿ | ತುಧಿಯು ಎತ್ತಿನಗಾಡಿ |
ಮೇಧುನಿಯೊಳರಿಧಿತು ಹೊಗೆಯಗಾಡೀ |
ಹದ್ದಾಗೆ ಹಾರುವದು ಗಾಳಿಯ ಗಾಡಿ
ಸದ್ಯಕಲಿಮಾಡುವದು ಮುಂದತ್ತು ಗಾಡೀ ||೧||
ಆಧಿವಾಣಿಯ ನುಡಿಯು ಬದಲು ಲಿಖಿತದ ನುಡಿಯು |
ನಾದ ಮಾಡುತ ಬಂತು | ತಂತಿಯ ನುಡಿಯೂ |
ಭೇದ ಹೇಳುವುದಯ್ಯ | ರೇಡಿಯ ನುಡಿಯೂ |
ಸಿದ್ಧವಾಗುದಯ್ಯ ಮುಂದೆಂಟು ನುಡಿಯೂ ||೨||
ಕಲ್ಲು ಮಣ್ಣಿನ ಬೊಂಬೆ | ಕಲಿಯೊಳಾಧಿತು ಮೊದಲು
ಕಲಿತು ಬಂದರು ಜನರು | ಚಿತ್ರದ ಬೊಂಬೆ
ಚಲುವ ಛಾಯದ ಬೊಂಬೆ | ಚಲನಚಿತ್ರದ ಬೊಂಬೆ |
ಚಲಿಸಿ ತೆಗೆಯು ಬಗೆಯು ಹದಿನೈದು ಮುಂದೇ ||೩||
ಕಾಗೆಕೋಗೆಲ ಮನುಜ ಧ್ವನಿಗೈದು ಆಧಿಯೊಳು |
ರಾಗ ಮಾಡುವುದಯ್ಯ | ಗ್ರಾಂಪೋನು ಈಗಾ |
ಕೂಗೆ ಹೇಳುವುದಯ್ಯ | ಆಕಾಶ ಭೂಮಿಯೊಳು |
ಸಾಕಿ ಸಲುವವ ಕಲಿಯು ಮುಗೆಯುವಮುನ್ನಾ ||೪||

ರಾಟಿ, ಮೇಟಿಗಳಾಧಿ । ಕೋಟಿವಾಟಿಗಳಾಧಿ
ನೀಟಾಗೆತಿರುಗುವ ಗೋಣಿಗಳು ಈಗಾ
ಧಿಟವು ಕಲಿಯೊಳು ಮುಂದೆ ರಾಟ ಮೆಟಗಳೆಂಟು ||೫||
ಮಾರಿಮಾರಕ ಮೊದಲು । ಜ್ವರ ಪ್ಲೇಗು ಗಡ್ಡೆಗಳು ।
ಹುರಿಯಾಗಿ ಬಂದಿತೋ ಇನಪ್ಲ್ಯುಂಜ ರೋಗಾ ।
ಸಾರಿ ಬರುವುದು ಮುಂದೆ ಆರು ತರಹದ ರೋಗ ।
ಹೊರುವರಿಲ್ಲದೆ ಜಗವು ಗುಜುಗುಟ್ಟುತಿಹುದೂ ||೬||
ಕೃತತ್ರೈತ ದ್ವಾಪರಾ । ಕಲಿಪ್ರಾಣ ಭುಕ್ತಿಗಳು
ಗತಿಸಿನ್ನು ಬರುವುದೋ ಕೃತಧರ್ಮಕಲಿಗೇ ।
ಸೋತು ಹೋದರು ರಾಜ್ಯ ಸತ್ಯ ಪ್ರಭುಗಳು ಮುಂದೆ
ಮತ್ತೆ ಹುಟ್ಟುವರಯ್ಯ । ಕಲಿಯೊಳಗೆ ಬೇಗಾ ೭||
ಐದು ಸಾವಿರದೊಳಗೆ । ಆದಿತೋ ಬಗೆಬಗೆಯು
ಆದಿ ಬ್ರಹ್ಮನ ದಯವು । ಬಸವನಿಗಾಗೇ ।
ಸಾಧು ಸಜ್ಜನ ಓದಿ ಭೇದವನರಿಯುವದು
ವೇಧಸಾರವು ವಾಖ್ಯ ಪುಸಿಯಲ್ಲ ಜಗದೀ ||೮||

ಯೇಸುಕ್ರಿಸ್ತರ ಹಾಗೂ ಮುನಿಪುಂಗವ ಸಾಧು ಬಸಜ್ಜನವರ ಕಾಲಜ್ಞಾನವು

**ಮುಗಿದುದು**



## ಇಸ್ಲಾಂ ಧರ್ಮದ ಕಾಲಜ್ಞಾನ ಮತ್ತು ಅದರ ಮೂಲತತ್ವವು ಮಕಸುಮುಬುಕಾರಿ ಕಿತಾಬ

ಹಿಜಯು ಒಂದು ಮೂರಾಂಶ ಏರಡನೇ ಭಾಗದಲ್ಲಿ ಪಾಪನಷ್ಟ ಪುಣ್ಯ ಸ್ಥಿರವಾಗಿ ಭಾರತೀಯನ ಮುಖಾಂತರ ಜಗತ್ತಿನ ಶಾಂತಿಯಾಗುವುದೆಂದು ಬರೆದಿರುವರು.

## ನೂಲಾಖುದ್ ಕಬ್ಬುಲ್ ಕಾಲಜ್ಞಾನ

ಇದು ಅರಬ್ಬಿ ಭಾಷೆಯಲ್ಲಿ ಶಕುಲ್ ಅಕ್ಬರ್ ಮಹಿದ್ದೀನ ಇಬ್ನೇ ಎಂಬ ಕಾಲಜ್ಞಾನ ವಚನ ಒಂದಾಗಿದೆ.

## ಅಲಾಮತೇ ಖಯಾಮತ್

ರಖಾಯೀಖುಲ್ ಅಬ್ಬರ ಎಂಬ ಮಹಮ್ಮದೀಯ ಗ್ರಂಥದಲ್ಲೂ ಕಾಲಜ್ಞಾನ ವಚನವಿರುತ್ತದೆ.

## ಇಸ್ಲಾಂ ಮತ್ತು ಈಮಾನ್

ಇಸ್ಲಾಮವು ಸುರಕ್ಷತೆ ಮತ್ತು ಶಾಂತತೆಗಳಿಗೆ ಹೊಣೆಯಾಗಿದೆ. ಇಸ್ಲಾಮದ ಶಬ್ದಾರ್ಥವು ೧) ಸುರಕ್ಷತೆ ಶಾಂತತೆ ೨) ಶಾಂತತೆ ಮತ್ತು ಸುರಕ್ಷತೆಗಳ ಮಾರ್ಗ ೩) ಸೇವೆ ಮಾಡೋಣ ಎಂದು ಆಗುತ್ತದೆ. ಶಾಂತತೆಯನ್ನು ಸ್ಥಿರಗೊಳಿಸುವಲ್ಲಿ ಪರಸೇವೆಯು ಸುಲಭ ಮಾರ್ಗವು. ಆದರೆ ಧಾರ್ಮಿಕ ದೃಷ್ಟಿಯಿಂದ ಇಸ್ಲಾಮದ ಅರ್ಥವು ದೇವರ ಪರಿಪೂರ್ಣವಾದ ಸೇವೆ ಮತ್ತು ತನ್ನನ್ನು ದೇವರಿಗೆ ಸಂಪೂರ್ಣವಾಗಿ ಅರ್ಪಿಸೋಣ ಎಂದು ಆಗುವದು.

## ಇಸ್ಲಾಮದ ಆಧಾರಸ್ತಂಭಗಳು

೧) ಏಕೇಶ್ವರಿ ತತ್ವ (ತೌಹೀರ) ೨) ಪ್ರವಾದಿತ್ವ (ರಿಸಾಲತ)

## ಇಸ್ಲಾಂ ಕೇಂದ್ರಗಳು

ಅರಬಸ್ತಾನದ ಪ್ರಮುಖ ಸ್ಥಳವಾದ ಮಕ್ಕಾ ಪಟ್ಟಣವು ಇಲ್ಲಿ ಜಗತ್ತಿನಲ್ಲಿ ಮೊದಲನೆಯದೆನಿಸಿದ ಅತಿ ಪ್ರಾಚೀನ ಕಾಲದಲ್ಲಿ ಕಟ್ಟಲ್ಪಟ್ಟ ಕಾಬಾ ಕ್ಷೇತ್ರ (ಮಸೀದಿ) ಉಂಟು ಈ ಕ್ಷೇತ್ರ ಯಾತ್ರಾ ಮಾಡಿದವರಿಗೆ ಹಾಜಿ ಎಂಬ ಗೌರವ ಪದವಿ ಪ್ರಾಪ್ತವಾಗುವದು.

## ಇಸ್ಲಾಮದ ಪವಿತ್ರ ಸ್ಥಳಗಳು

೧) ಪಾಲಿಸ್ಟೈನ ದೇಶದೊಳಗಿನ ಏರುಸಲೇಮ ಪಟ್ಟಣದಲ್ಲಿರುವ ಅಕ್ಸಾ ಮಸೀನೆಯು ಇಲ್ಲಿ ಹ॥ ಮಹಮ್ಮದ ಪೈಗಂಬರರಿಗೆ ಒಂದು ರಾತ್ರಿ ದೇವರು ಪ್ರಸನ್ನನಾದನು. ಈ ರಾತ್ರಿಗೆ ಷಬೆಯೇ ಬರಾತ ಎನ್ನುವರು.

ಮಕ್ಕಾ ಪಟ್ಟಣದ ಉತ್ತರ ಭಾಗದಲ್ಲಿ ಮದಿನಾ ಎಂಬ ಮತ್ತೊಂದು ದೊಡ್ಡ ಪಟ್ಟಣ ಉಂಟು. ಅಲ್ಲಿ ಮಹಮ್ಮದ ಪೈಗಂಬರರು ೧೦ ವರ್ಷ ಇಸ್ಲಾಮದ ಪ್ರಚಾರ ಮಾಡಿ ಅಲ್ಲಿಯೇ ದೇವರಲ್ಲಿ ಐಕ್ಯ ಹೊಂದಿದರು, ಅಲ್ಲಿಯೇ ಅವರ ಗೋರಿಯುಂಟು. ಮಕ್ಕಾ ಯಾತ್ರೆಗೆ ಹೋದ ಯಾತ್ರಿಕರು ಮದಿನಾಕ್ಕೆ ಹೋಗಿ ಪೈಗಂಬರರ ಸಮಾಧಿಗೆ ಪುಷ್ಪಾರ್ಪಣೆ ಮಾಡಿ ಬರುವರು.

## ಇಸ್ಲಾಮದ ಧ್ಯೇಯ

ಇಸ್ಲಾಮವು ತನ್ನ ಅನುಯಾಯಿಗಳಿಗೆ ಸಂಪೂರ್ಣವಾದ ಮಾರ್ಗದರ್ಶವಾಗಿದೆ. ಅಂದರೆ ದೇವರ ವಿಷಯವಾಗಿ ಮತ್ತು ಜನತೆಯ ವಿಷಯವಾಗಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಸ್ಪಷ್ಟವಾಗಿ ತಿಳಿಸುತ್ತದೆ. ಇನ್ನು ಜನತೆಯ ಸಂಗಡ ನಡೆದುಕೊಳ್ಳುವಲ್ಲಿ ಕಾಯಾ –ವಾಚಾ ಮನಸ್ಸುಗಳಿಂದ ಯಾರಿಗೂ ಯಾವ ಪ್ರಕಾರದ್ದು ತೊಂದರೆಯಾಗದಂತೆ ಆಚರಿಸಬೇಕೆಂಬುದಾಗಿ ಹಃ ಮಹಮ್ಮದ ಪೈಗಂಬರರ ವಚನವಿದೆ. ಇದರಿಂದ ಮನುಷ್ಯನಲ್ಲಿ ಗೌಪ್ಯವಾಗಿರುವ ಒಳ್ಳೇ ಮತ್ತು ಪುಣ್ಯದ ಸಂಗತಿಗಳು ಕೃತಿಯಲ್ಲಿ ಪರಿಣಮಿಸುತ್ತದೆ. ಇದಲ್ಲದೆ ಅವನಲ್ಲಿ ಶಾಂತತೆಯು ಸ್ಥಿರವಾಗುತ್ತದೆ.

## ಇಸ್ಲಾಮದ ಪೈಗಂಬರರು

ಹಃ ಮಹಮ್ಮದ ಪೈಗಂಬರರು ದೇವರಿಂದ ಬಂದ ಧರ್ಮದ ಎಲ್ಲಕ್ಕೂ ಕೊನೆಯ ಪೈಗಂಬರರು ಅಂದರೆ ಇಸ್ಲಾಂ ಧರ್ಮದ ೨೪ನೆಯ ಪೈಗಂಬರರ ತರುವಾಯ ೨೫ ನೆಯ ಪೈಗಂಬರರೇ ಇವರು. ಮಾನವರ ಸದುಪದೇಶದ ಸಲುವಾಗಿ ದೇವರಿಂದ ಈ ಮೊದಲು ಬಂದಂಥ ಹಜರತ್ ಇಬ್ರಾಹೀಮ ಮೂಸಾ ಈಸಾ ಇತ್ಯಾದಿ ಎಲ್ಲ ಪೈಗಂಬರರಲ್ಲಿ ಹಃ ಮಹಮ್ಮದ ಪೈಗಂಬರರು ಸತ್ಯವಾದಿಗಳೂ ಒಳ್ಳೇ ಶ್ರೇಷ್ಠರೂ ಎಂದು ಮುಸಲ್ಮಾನರು ನಂಬುವರು.

## ಕುರಾನ್

ಕುರಾನ್ ಅಂದರೆ ಫುರ್ಕಾನ್ ಫುರ್ಕಾನ್‌ವೆಂದರೆ ಸತ್ಯಾಸತ್ಯಗಳಲ್ಲಿದ್ದ ತಾರತಮ್ಯವನ್ನು ತೋರಿಸುವದು- ಕುರಾನವು ಮುಸಲ್ಮಾನರ ಪವಿತ್ರ

ಗ್ರಂಥವು ಪ್ರತಿಯೊಂದು ಪವಿತ್ರ ಗ್ರಂಥವು ದೇವರಿಂದ ಬಂದಿರುವುದೆಂದು ಅವರು ನಂಬುತ್ತಾರೆ. ಆದರೆ ಈ ಮೊದಲು ಬಂದಂಥ ಗ್ರಂಥಗಳಲ್ಲಿ ಮನುಷ್ಯನು ಹೆಚ್ಚು ಕಡಿಮೆ ಮಾಡಿರುವದರಿಂದ ದೇವರು ಕುರಾನವನ್ನು ಕಳಿಸಿದನು. ಇದರಲ್ಲಿ ಈ ಪೂರ್ವದಲ್ಲಿ ಬಂದ ಎಲ್ಲ ಗ್ರಂಥಗಳ ನಿಜತ್ವದ ಬಗ್ಗೆ ಆಧಾರಗಳುಂಟು.

## ಇಸ್ಲಾಮದ ಭಕ್ತಿ ವಿಶ್ವಾಸಗಳು

ದೇವರು ಒಬ್ಬನೇ ಇದ್ದಾನೆ. ಅವನ ದೇವದೂತರುಂಟು. ಅವನ ಗ್ರಂಥಗಳುಂಟು. ಪೈಗಂಬರರೆಲ್ಲರೂ ದೇವರಿಂದ ಬಂದವರು. ದೇವರ ನ್ಯಾಯ ತೀರ್ಪಣಿಯ (ಕಿಯಾಮತ) ದಿನವುಂಟು. ನಾವು ಮಾಡುವ ಪಾಪ ಪುಣ್ಯಗಳ ಅಂದಾಜು ದೇವರಿಗೆ ಮೊದಲೇ ಗೊತ್ತುಂಟು. ಸತ್ತ ನಂತರ ಮಾನವರೆಲ್ಲರೂ ಪುನಃ ಹೇಳುವರು ಎಂಬುದಾಗಿ ಮುಸಲ್ಮಾನರ ದೃಢವಾದ ನಂಬುಗೆ (ಈಮಾನ) ಉಂಟು. ಮುಂದೆ ವಿವರಿಸಿದ ಈಮಾನದ ವಿಷಯದಲ್ಲಿ ಮೇಲ್ಕಾಣಿಸಿದ ಏಳೂ ಸಂಗತಿಗಳ ಬಗ್ಗೆ ಸ್ಪಷ್ಟೀಕರಣ ಇರುವದು.

## ಇಸ್ಲಾಮದ ಮುಖ್ಯ ಆಜ್ಞೆಗಳು

೧) ಕಲಮಾ ಅನ್ನೋಣ ಅಂದರೆ ದೇವರು ಒಬ್ಬನೇ ಇದ್ದಾನೆ. ಅವನ ಹೊರತು ಬೇರೆ ದೇವರಿಲ್ಲ. ಹ|' ಮುಹಮ್ಮದರು ಆತನ ಪೈಗಂಬರರು ಎಂದು ನುಡಿಯುವರು. ೨) ನಮಾಜ ಮಾಡುವದು. ೩) ರಮಜಾನ ತಿಂಗಳಲ್ಲಿ ಉಪವಾಸವಿರುವದು. ೪) ತಮ್ಮ ನಿವ್ವಳ ಲಾಭದಲ್ಲಿ ನೂರಕ್ಕೆ ಎರಡೂವರೆಯಂತೆ [ಜಕಾತ] ದಾನಧರ್ಮ ಕೊಡುವದು. ೫) ಮಕ್ಕಾಯಾತ್ರೆ (ಹಜ್) ಮಾಡುವದು. ಕಡೆಯ ಎರಡು ಆಜ್ಞೆಗಳು ವಿಶೇಷವಾಗಿ ಶ್ರೀಮಂತರ ಸಲುವಾಗಿ ಇರುವದು. ಇಸ್ಲಾಮದ ಅಕ್ಷರಗಳ ಸಂಖ್ಯಾ ಗಣನೆಯಲ್ಲಿ ಮೇಲ್ಕಂಡ ಐದು ಆಜ್ಞೆಗಳ ಅರ್ಥವು ಗರ್ಭಿತವಾಗಿರುವದು.

೦

## ದೇವರ ಗುಣಗಳು

ಮುಸಲ್ಮಾನರು ಒಬ್ಬನೇ ದೇವರನ್ನು ಪೂಜಿಸುವರು. ಅವನು ಸರ್ವ ಶಕ್ತನೂ ಅಪ್ರತ್ಯಕ್ಷದಲ್ಲಿರುವ ಸಂಗತಿಗಳನ್ನು ಸಹ ಒಲ್ಲವನೂ ನ್ಯಾಯ ಮೂರ್ತಿಯೂ ಎಲ್ಲಾ ಜಗತ್ತಿನ ಒಡೆಯನೂ ಗೆಳೆಯನೂ ಒಳ್ಳೇ ಮಾರ್ಗ ದರ್ಶಕನೂ ಆಗಿರುವನು. ಅವನಿಗೆ ಸರಿಯಾದ ಬೋರೊಂದು ವಸ್ತು ಇಲ್ಲ ಅವನು ಯಾರಿಂದಲೂ ಹುಟ್ಟಿಲ್ಲ ಮತ್ತು ಅವನಿಂದ ಯಾರೂ ಹುಟ್ಟಿರ ಲಿಲ್ಲ (ಅವನಿಗೆ ತಂದೆ ಮಕ್ಕಳ ಸಂಬಂಧವಿಲ್ಲ) ಅವನು ಭೂಮಿ ಆಕಾಶ ಗಳಲ್ಲಿ ವ್ಯಾಪಿಸಿರುವ ಒಂದು ತೇಜವು. ದಯಾಳು ಮತು ಎಲ್ಲ ಕ್ಕೂ ದೊಡ್ಡವನಿದ್ದಾನೆ.

## ವಿಶ್ವಾಸ ಮತ್ತು ಕೃತಿಗಳು

ಭಕ್ತಿ ವಿಶ್ವಾಸಗಳು ಕೃತಿಯಲ್ಲಿರದಿದ್ದರೆ ನಿರ್ಜೀವವೆನಿಸುವವು ಕಾರಣ ವಿಶ್ವಾಸವಿಟ್ಟಂತೆ ನಡೆಯಬೇಕು. ಅಂದರೆ ಅದು ನಿಜವಾದ ಭಕ್ತಿ ಎನಿಸು ವದು. ಈ ಭೂಲೋಕದೊಳಗಿನ ತಮ್ಮ ಕೃತಿಗಳಿಗೆ ತಾವೇ ಹೊಣೆಗಾರ ರಿರುವರೆಂದೂ ಅವುಗಳ ತೀರ್ಪು ಒಂದು ದಿನ ದೇವರ ಮುಂದೆ ಆಗುವು ದೆಂದೂ ಮುಸಲ್ಮಾನರು ನಂಬುತ್ತಾರೆ. ಅಂದಮೇಲೆ ಒಬ್ಬನ ಪಾಪಕ್ಕೆ ಬೇರೊಬ್ಬನು ಹೊಣೆಯಾಗಲಾರನು.

## ಇಸ್ಲಾಮದ ಶೀಲ ಸ್ವಭಾವಗಳು

ಪ್ರತಿಯೊಬ್ಬರು ದೇವರ ಗುಣಗ್ರಾಹಿಗಳಾಗಬೇಕೆಂದು ಹ|| ಮಹ್ಮದ ಪೈಗಂಬರರ ವಚನವಿದೆ; ದೇವರು ಮನುಷ್ಯನ ಸಲುವಾಗಿ ಅನುಕರಣೀಯ ನಾಗಿದ್ದಾನೆ. ಆತನ ಗುಣಗಳು ಇಸ್ಲಾಮದ ಶೀಲ ಸ್ವಭಾವಗಳ ತಳಹದಿ ಗಳಾಗಿರುವವು. ಇಸ್ಲಾಮದ ದೃಷ್ಟಿಯಿಂದ ಮನುಷ್ಯ ಜೀವನವು ದೇವರ ಗುಣಗಳಿಂದ ತುಂಬಿತುಳಕೋಣವೇ ಪುಣ್ಯ ಇದರ ವಿಪರೀತವಾಗಿರೋ ಣವೇ ಪಾಪವೆನಿಸುವದು.

ಇಸ್ಲಾಮದ ದೃಷ್ಟಿಯಿಂದ ಮನುಷ್ಯನ ಯೋಗ್ಯತೆಯು ಮನುಷ್ಯನು ನೈಸರ್ಗಿಕ ದೃಷ್ಟಿಯಿಂದ ನಿರ್ದೋಷಿಯಾಗಿರುವನೆಂದೂ ಅವನು ಸರ್ವೋತ್ಕೃಷ್ಟ ರೀತಿಯಿಂದ ಜನಿಸಿರುವನೆಂದೂ ಅತ್ಯಂತ ಉನ್ನತಿಯನ್ನು ಹೊಂದಲು ಯೋಗ್ಯನಿರುವನೆಂದೂ ಮುಸಲ್ಮಾನರ ದೃಢವಾದ ಸಂಬುಗೆಯುಂಟು. ಇಷ್ಟೇ ಅಲ್ಲ ದೇವದೂತರಿಗಿಂತಲೂ ಉಚ್ಚ ಸ್ಥಾನವನ್ನು ಹೊರಡಿಸಲು ಪಾತ್ರನಿರುವನೆಂದೂ ಅವರ ವಿಶ್ವಾಸವಿರುತ್ತದೆ.

## ಇಸ್ಲಾಮದಲ್ಲಿ ಸ್ತ್ರೀಯರ ಯೋಗ್ಯತೆಯು

ಸ್ತ್ರೀ ಪುರುಷರ ಜನನವು ಒಂದೇ ಬಗೆಯಿಂದಾಗಿರುವದು. ಇವರೀರ್ವರಲ್ಲಿರುವ ಆತ್ಮವು ಒಂದೇ, ಮಾನಸಿಕ ನೈತಿಕ ಮತ್ತು ಆತ್ಮೋನ್ನತಿಗಳ ಇಬ್ಬರಿಗೂ ಸರಿಯಾದ ಶಕ್ತಿಗಳೂ, ಕೊಡಲ್ಪಟ್ಟಿರುವವು. ಮತ್ತು ಧರ್ಮಾಚರಣೆಯಲ್ಲಿ ಸ್ತ್ರೀಪುರುಷರಬ್ಬರಿಗೂ ಒಂದೇ ಬಗೆಯ ಆಜ್ಞೆಗಳು ಉಂಟು.

## ಇಸ್ಲಾಮದ ದೃಷ್ಟಿಯಲ್ಲಿ ಮಾನವರೆಲ್ಲರೂ ಸಮಾನರು ಮತ್ತು ಬಂಧುಗಳಾಗಿರುವರು

ಇಸ್ಲಾಮವು ದೇವರು ಒಬ್ಬನೇ ಇರುವನೆಂದೂ ಮನುಷ್ಯರೆಲ್ಲರೂ ಸರಿಸಮಾನರೆಂದೂ ಒತ್ತಿ ಹೇಳುತ್ತದೆ. ಮತ್ತು ಈ ಸಂಗತಿಗೆ ಹೊಣೆಯಾಗಿರುತ್ತದೆ. ವಂಶಸಂಪತ್ತು, ಮನೆತನದ ದೊಡ್ಡಸ್ಥಿಕೆ ಮೊದಲಾದವುಗಳ ಪುರವಣಿ ಸಂಗತಿಗಳಾಗಿರುವವು. ಇಸ್ಲಾಮವು ವರ್ಣವಂಶ ರಾಷ್ಟ್ರಗಳಲ್ಲಿ ಯಾವ ತಾರತಮ್ಯವನ್ನು ಮಾಡುವುದಿಲ್ಲ. ಮಾನವರೆಲ್ಲರೂ ಒಂದೇ ಮನೆತನದವರೆಂದೂ ತಿಳಿದು ಕಪ್ಪು ಕೆಂಪು ಎಂಬ ವರ್ಣಭೇದಕ್ಕೆ ಇಂಬುಗೊಡದೆ ಎಲ್ಲರನ್ನೂ ಕೂಡಿಸಿರುವದು.

## ವಿದ್ಯೆಯ ಮಹತ್ವ

ವಿದ್ಯಾಸಂಪಾದನ ಮಾಡುವದು ಇಸ್ಲಾಮದಲ್ಲಿ ಮುಖ್ಯ ಕರ್ತವ್ಯವಾಗಿದೆ. ವಿದ್ಯೆಯ ಬಲದಿಂದ ಮನುಷ್ಯನು ದೇವದೂತರಿಗಿಂತಲೂ ಉಚ್ಚ ಪದವಿಯನ್ನು ಪಡೆಯುತ್ತಾನೆ.

## ವ್ಯವಸಾಯ ಪವಿತ್ರತೆ

ಮನುಷ್ಯನು ತನ್ನ ಉಪಜೀವನದ ಸಲುವಾಗಿ ಉದ್ಯೋಗಗಳನ್ನು ಮಾಡುವನು. ಇಸ್ಲಾಮದಲ್ಲಿ ಮರ್ಯಾದೆಯುಳ್ಳದ್ದಾಗಿರುವದು. ಆಲಸ್ಯತನವು ಪಾಪವೆನಿಸುವದು.

## ಗಳಿಕೆ ಬಳಿಕೆಗಳು

ಮನುಷ್ಯನಲ್ಲಿರುವ ಶಕ್ತಿಗಳು ದೇವರ ದೇಣಿಗೆಗಳಾಗಿರುವವು ಅವನು ಆ ಶಕ್ತಿಗಳನ್ನು ಪರೋಪಕಾರಕ್ಕಾಗಿ ಉಪಯೋಗಿಸಬೇಕು. ಪರಹಿತ ಮಾಡುವುದೇ ಅವನ ಕರ್ತವ್ಯವಾಗಿದೆ. ಅವನು ಮಾಡುವ ದಾನವು ಸಾಮಾನ್ಯವಾಗಿರಬೇಕು. ದಾನವು ದೇವರ ಸಾನಿಧ್ಯವನ್ನು ದೊರಕಿಸಿಕೊಡುವದು ಅದು ಮೂಲ ಇಸ್ಲಾಮದಲ್ಲಿ ಜಕಾತ ಮತ್ತು ದಾನ ಮಾಡೋಣ ಇವು ಮುಖ್ಯ ಕರ್ತವ್ಯವಾಗಿರುವವು ಜಕಾತವು ಬಡವರ ಸಹಾಯಾರ್ಥವಾಗಿ ಶ್ರೀಮಂತರ ಮೇಲೆ ಹೇರಿದ ಒಂದು ಪ್ರಕಾರದ ಕರವಾಗಿರುವದು.

## ಈಮಾನದ ವಿವರಣೆ

ಸಿದ್ಕೆದಿಲ್ ದಾಃಸ ಹಕೀಕತೇ ಈಮಾನಸ್ತ
ಷರ್ತೆ ಅಹಕಾಮೆವೂಬಕೌಲೆಜೀಬಾನಸ್ತ
ಲಜ್ಜತೇ ಈಮಾನಪಚಾಯದದಕ ಅಮಲ್
ಮುರ್ದಾಪನ್ ಈಮಾನ್ ಕಿ ನಾಯೆದದಕ ಅಮಲ್
(ಡಾ. ಇಕ್ಬಾಲ)

ಬಾಯಿಯಿಂದ ನುಡಿದು.ಅದರಂತೆ ಮನಸ್ಸಿನಲ್ಲಿ ದೃಢವಾದ ನಂಬುಗೆಯನ್ನೀಡುವುದೇ ಈಮಾನ್‌ದ ಲಕ್ಷಣವು. ಕೃತಿಯಿಂದ ಈಮಾನ್‌ದ ಸತ್ವವು ಬೆಳೆಯುವದು. ಕೃತಿಯಲ್ಲಿರದ ಭಕ್ತಿಯು ನಿರ್ಜೀವವೆನಿಸುವದು.

ಈಮಾನ್‌ವೆಂದರೆ ನಮ್ಮ ಪೈಗಂಬರರು ಕಲಿಸಿದ ಇಸ್ಲಾಮು ಧರ್ಮದ ತತ್ವಗಳು ನಿಜವಾಗಿರುವವೆಂದು ಬಾಯಿಯಿಂದ ನುಡಿದು ಮನಸ್ಸಿನಲ್ಲಿ ದೃಢವಾದ ನಂಬಿಗೆಯನ್ನಿಡುವದು ನಡೆನುಡಿಗಳೆರಡು ಈಮಾನದ ತಳಹದಿ

ಗಳಾಗಿರುವವು. ನಮ್ಮ ಮೇಲೆ ಒದಗುತ್ತಿರುವ ಸುಖ-ದುಃಖಗಳು ಕೇವಲ ದೇವರ ಇಚ್ಛೆಯಿಂದ ಒದಗುವವು ಸತ್ಯಯುವು. ಕಾರಣ ನಾವು ನಮ್ಮಿಂದ ಅದೃಶ್ಯವಾಗಿರುವ ದೇವರನ್ನು ಆತನ ಗುಣಗಳ ದ್ವಾರಾ ನಂಬಿಕೊಂಡು ಆವನನ್ನು ಪೂಜಿಸಬೇಕು. ನುಡಿದಂತೆ ನಡೆಯದಿದ್ದರೆ ಈಮಾನದಲ್ಲಿ ಕೊರತೆ ಯಾಗುವದು. ನಡೆ ಇಲ್ಲದ ನುಡಿ ಬಳಕೆಯಲ್ಲಿರದ ವಿದ್ಯೆ ಉಪ್ಪಿಲ್ಲದ ಪಕ್ವಾನ್ನದಂಥ ಅರುಚಿಯಾಗುವಂತೆ ನಂಬುಗೆಯಂತೆ ನಡೆಯುವುದೇ ಈಮಾನದ ಮುಖ್ಯ ತತ್ವವು ನಮ್ಮ ಹ|| ಪೈಗಂಬರರು ಕಿಯಾಮತದ ಸಂಬಂಧವಾಗಿ ಅನೇಕ ಕಾಲಜ್ಞಾನದ ಕುರುಹುಗಳನ್ನು ಹೇಳಿರುವದರಲ್ಲಿ ಕೆಲವನ್ನು ಹೇಳುವೆವು.

## ದಜ್ಜಾಲನು ಜನಿಸುವನು

ದಜ್ಜಾಲನೆಂಬ ನೀಚ ವ್ಯಕ್ತಿಯು ಭೂಮಿಯಲ್ಲಿ ಜನಿಸಿದ ಕೂಡಲೇ ಜನರಲ್ಲಿ ಭಕ್ತಿ ವಿಶ್ವಾಸಗಳು ಕಡಿಮೆಯಾಗುವವು. ಪ್ರಾಪಂಚಿಕ ಆಶೆ ಹವ್ಯಾಸಗಳು ಬೆಳೆದು ಜನರಲ್ಲಿ ದೇವರ ಸಂಬಂಧ ಒಲವು ಕಡಿಮೆಯಾಗು ವದು. ಇವನು ನಾನೇ ದೇವರು. ನನ್ನನ್ನೇ ಪೂಜಿಸಬೇಕೆಂದು ಸಾರುವನು. ಕೆಲವು ಮಾಟ ಚಮತ್ಕಾರಗಳನ್ನು ತೋರಿಸುವನು. ಅಪಾರ ಸಂಪತ್ತನ್ನೂ ಸಂಪಾದಿಸುವನು. ಇದರಿಂದ ಮನಸ್ಸಿನಲ್ಲಿ ದೃಢನಿಶ್ಚಯವಿಲ್ಲದ ಎಷ್ಟೋ ಜನರು ಇವನೇ ದೇವರೆಂದು ನಂಬಿ ಪೂಜಿಸುವರು.

## ಸೂರ್ಯನು ಪಶ್ಚಿಮ ದಿಕ್ಕಿನಿಂದ ಉದಯಿಸುವದು

ಆಗ್ಗೆ ಜಿಲ್ ಹೆಜ್ ತಿಂಗಳಲ್ಲಿ ಒಂದು ರಾತ್ರಿಯು ಮಾನವು ವಿಶೇಷ ಬೆಳೆಯುವದು. ಅದರಿಂದ ಜನರು ಭಯಭೀತಿಯುಳ್ಳವರಾಗುವರು. ಮತ್ತು ಎಲ್ಲಾ ಕಡೆಗೂ ಹಾಹಾಕಾರ ಉಂಟಾಗುವದು. ಕೂಡಲೇ ಬೆಳಗಿನ ಚಿಹ್ನೆ ಗಳು ವ್ಯಕ್ತವಾಗಿ ಸೂರ್ಯನು ಪಶ್ಚಿಮ ದಿಕ್ಕಿನಲ್ಲಿ ಮೂಡುವನು. ಇದ ರಿಂದ ಜನರು ಮತ್ತಷ್ಟು ಗಾಬರಿಯಾಗುವರು. ನಂತರ ಸೂರ್ಯನು ಸ್ವಲ್ಪ ಮೇಲಕ್ಕೇರಿ ಪುನಃ ಪಶ್ಚಿಮ ದಿಕ್ಕಿನಲ್ಲಿ ಮುಳುಗುವನು. ಆಮೇಲೆ ಮೊದಲಿನಂತೆ ಮೂಡಿ ಮುಳುಗಹತ್ತುವನು.

## ದಾಬ್ಬತುಲ್ ಅರ್ಜನು ಹಲ್ಟುವನು

ಸೂರ್ಯನು ಪಶ್ಚಿಮ ದಿಕ್ಕಿನಿಂದ ಮೂಡಿದ ಮರುದಿವಸವೇ ಮಕ್ಕಾ ಪಟ್ಟಣದ ಹತ್ತಿರಿರುವ ಸಫಾಪವರ್ತವು ಒಮ್ಮಿಂದೊಮ್ಮೆ ಬಿರಿತು ಅದರೊಳಗಿಂದ ದಾಬ್ಬತುಲ್ ಅರ್ಜನು ಹುಟ್ಟುವನು. ಇವನ ತಲೆಯು ಮನುಷ್ಯನ ತಲೆಯಂತೆ ದೇಹವು ಪ್ರಾಣಿಗಳ ದೇಹದಂತೆಯೂ ಇರುವದು. ಇದರಿಂದ ಜನರು ಭಯಗ್ರಸ್ತರಾಗುವರು. ಇಡೀ ಜಗತ್ತಿನ ಪ್ರವಾಸ ಮಾಡುವನು. ಮತ್ತು ನಿಜವಾದ ಮುಸಲ್ಮಾನರು ಯಾರು ಹೆಸರಿಗೆ ಮಾತ್ರ ಮುಸಲ್ಮಾನರೆನಿಸಿಕೊಳ್ಳುವವರಾರು ಎಂಬುದನ್ನು ಪರೀಕ್ಷಿಸಿ ಮುದ್ರೆಯನ್ನೊತ್ತಿ ಈಮಾನದ ಪರೀಕ್ಷೆಯನ್ನು ಮಾಡುವನು.

## ಯಾಜೂಜಮಾಜೂಜರು ಹುಟ್ಟುವರು

ಯಾಜೂಜ ಮಾಜೂಜರೆಂಬ ಮಾನವ ವರ್ಗದ ಬಾಂಧವರು ಹುಟ್ಟುವರು. ಇವರು ಉನ್ಮತ್ತರು, ಉದ್ಧಟರು ಜಗಳಗಂಟರು ಕ್ರೂರರು ನಿರ್ದಯಿಗಳು ಆಗಿರುವರು. ಮತ್ತು ಎತ್ತರವಾದ ಬಹು ಗಟ್ಟಿಯಾಗಿರುವ ಗೋಡೆಯ ಹೊದರಿನಲ್ಲಿ ಇರುತ್ತಾರೆ. ಕಿಯಾಮತದ ಸಮೀಪದಲ್ಲಿ ಆ ಗೋಡೆಯು ಬೀಳಲು ಇವರು ಹೊದರಿನಿಂದ ಹೊರಬಿದ್ದು ಜನರಲ್ಲಿ ಒಡಕನ್ನುಂಟು ಮಾ ಪರಿಪರಿಯಿಂದ ಪೀಡಿಸುವರು. ಇದರಿಂದ ಜನರ ಮನಸ್ಸಿನಲ್ಲಿದ್ದ ಭಕ್ತಿಯು ಮತ್ತು ವಿಶ್ವಾಸಗಳೂ ಕಡಿಮೆಯಾಗುವವು.

॥ ಇತಿ ಇಸ್ಲಾಂ ತತ್ವದ ಕಾಲಜ್ಞಾನ ಸಂಪೂರ್ಣಂ ॥

ಇತೀ ॥ ಹರಿಹರವರಪರಾಯಣ ಪಯಃ ಪಾರಾವಾರಾರಾಕಾ ಸುಧಾಕರಾಯಮಾನ ದಾವಣಗೆರೆ ತಾಲ್ಲೂಕಿಗೆ ಸೇರಿದ ಅಣಜಿ ದ್ಯಾವ ವ್ವನಹಳ್ಳಿ ಬ್ರಹ್ಮತೀರ್ಥಾಶ್ರಮ ನಿವಾಸಿಗಳಾದ ವಾನಪ್ರಸ್ಥಾಶ್ರಮ ಯ ಮಂತ್ರಯೋಗಿ ಪಂಡಿತ ಶ್ರೀ ರೇವಣಜ್ಜ ಕೃತ ಹಿಂದೂ ಕ್ರೈಸ್ತ ಮುಸ್ಲಿ ಮಹಾತ್ಮರ ಶಿವಶಕ್ತಿ ಕಾಲಜ್ಞಾನವು —




ಸಮಾಪ್ತಿ....

# .... ಸಂಗೀತ ನಾಟಕಗಳು ....

| | |
|---|---|
| ಲಕ್ಷ್ಮಿ-ಸರಸ್ವತಿ | ಹ. ವಡಿಗೇರಿ ಕೃತ |
| ದಾಸಿ ಮೆಚ್ಚಿದ ದೇಸಾಯಿ | " " |
| ಅತ್ತಿಗೆಯೆ ಹೆತ್ತಮ್ಮ | ಇಂಗಳಹಳ್ಳಿ ಕೃತ |
| ಸಾವುಕಾರನ ಗದ್ಲ | ಪಾಷಾ ಕೃತ |
| ಮಗಳ ಮಾಂಗಲ್ಯ | ಮೋಖಾಶಿ ಕೃತ |
| ರೈತ ರಾಜ್ಯ | " " |
| ಬಂಗಾರದ ಮನುಷ್ಯ | ಕಡಪಟ್ಟಿ ಕೃತ |
| ಮನೆಗೆ ತಕ್ಕ ಮಗ | " " |
| ಮದನ ಮೋಹನ | " " |
| ಚಿನ್ನದ ಗೊಂಬೆ | " " |
| ಭಲೆ ಮಗಳೆ | " " |
| ಸಂಗಮ | " " |
| ಗೌಡ್ರ ಗದ್ಲ | ಬಿ. ವ್ಹಿ. ಈಶ ಕೃತ |
| ಕಲಿತ ಕಳ್ಳ | " " |
| ರತ್ನ ಮಾಂಗಲ್ಯ | ಜೋಶಿ ಕೃತ |
| ರಾಮು ರಹೀಮು | " " |
| ಬಂಜೆ ತೊಟ್ಟಿಲು | " " |
| ಸೋತು ಗೆದ್ದ ಸಾಧ್ವಿ | " " |
| ಹುಚ್ಚಿ ಹಚ್ಚಿದ ದೀಪ | " " |
| ಹುಚ್ಚು ಬಿಡಿಸಿದ ಹೆಣ್ಣು | " " |
| ಹಾಸಿಗೆ ಇದ್ದಷ್ಟು ಕಾಲು ಚಾಚು | " |
| ಸಮಾಜಕ್ಕೆ ಸವಾಲು (ಯಾರತಪ್ಪು) | " |
| ರೈತನೇ ಅನ್ನದಾತ | ತಾರನಾಳ ಕೃತ |
| ಬಸ್ ಹಮಾಲ | " " |
| ದೇವರಿಲ್ಲದ ಗುಡಿ | " " |
| ಜಾಣ ಜಾರಿ ಬಿದ್ದ | " " |
| ಹುಡುಗಿ ಅಂಥವಳಲ್ಲ | " " |
| ಬಂದ್ನಪ್ಪೊ ಮುಸರಿ ಮಾವಾ | " " |
| ಸಂಪನ್ನರು | ಹೂಗಾರ ಕೃತ |
| ಕೊರವಂಜಿ | " " |
| ತಾಳ ತಪ್ಪಿದ ಬಾಳು | " " |
| ಕಣ್ಣು ನೀಡಿದ ಹೆಣ್ಣು | " " |
| ಮನೆಗೆದ್ದು ಮಾರು ಗೆಲ್ಲು | " " |

| | |
|---|---|
| ಪುಢಾರಿ ನಂಜಪ್ಪ | ಬ. ಜಮಖಂಡಿ ಕೃತ |
| ಚಿಕ್ಕ ಸೊಸೆ | ಧುತ್ತರಗಿ ಕೃತ |
| ಸರ್ವಮಂಗಳಾ | " " |
| ಸಂಪತ್ತಿಗೆ ಸವಾಲು | " " |
| ಸುಖದ ಸುಪ್ಪತ್ತಿಗೆ | " " |
| ಪಂಚಾಯತಿ ರಾಜ್ಯ | " " |
| ಪಣಕಿಟ್ಟ ಪ್ರಮಾಣ | " " |
| ಮನೆ ಎರಡು ಮನ ಒಂದು | " " |
| ಹೆಣ್ಣು ಮಗಳು | ಅರಿಷಿಣಗುಡಿ ಕೃತ |
| ಬಸ್ ಕಂಡೆಕ್ಟರ | " " |
| ಕಣ್ಣಿದ್ದು ಕುರುಡ | " " |
| ಸೈನಿಕನ ಸಹೋದರಿ | " " |
| ಇಲ್ಲಿಗೋ ಬಂತೋ ಸಂಗಯ್ಯಾ | " |
| ಪೂರ್ಣಿಮಾ | ಲಿಂಗರಾಜ ಕೃತ |
| ಗಂಡನ ಆಜ್ಞೆ | " " |
| ತಂಗಿಯ ತಾಳಿ | " " |
| ಮುತ್ತಿನ ಮಾಂಗಲ್ಯ | " " |
| ಖಾದಿ ಸೀರೆ | ಬಿ. ಓಬಳೇಶ್ವರ ಕೃತ |
| ಮುಂಡೇ ಮಗ | " " |
| ಹೋಳಿ ಹುಣ್ಣಿವೆ | " " |
| ಶ್ರೀ ಕಲಬುರ್ಗಿ ಶರಣ ಬಸವೇಶ್ವರ | " |
| ನಾರೀಮಣಿ | ಮಾಂಡ್ರೆ ಕೃತ |
| ಚರಣ ದಾಸಿ | " " |
| ಪಡೆದ ಮುತ್ತು | " " |
| ಗಾಂಧಿ ಟೋಪಿ | " " |
| ಲವ್ ಇನ್ ಹುಬ್ಬಿ | " " |
| ಇವನೆಂಥ ಗಂಡ | ಮಹಾಂತೇಶ ಕೃತ |
| ಕಲಿತ ಕತ್ತೆ | " " |
| ದೇವರ ಜಜ್ಜಮೆಂಟ | ಸಾಳುಂಕೆ ಕೃತ |
| ಬದುಕು ಬಂಗಾರವಾಯ್ತು | " " |
| ದೇವರಿಗೆ ನೆನಪಿಲ್ಲ | " " |
| ಗಂಡನ ಮಾನ | ಹೊಸಮನಿ ಕೃತ |
| ಸಿಂಧೂರ ಲಕ್ಷ್ಮಣ | ನದಾಫ ಕೃತ |

**ಎಂ. ಎಂ. ಕರಡಿ ಆ್ಯಂಡ ಸನ್ಸ ಹುಬ್ಬಳ್ಳಿ**